*As per approved Syllabus of D. P. I. for Compulsory Hindi Grammar in Primary VI and VII standards, high school VIII, IX and X standards and T. C. H. and T. C. L. in the Mysore State.*

# ಕಂಪಲ್ಸರಿ ಹಿಂದೀ ವ್ಯಾಕರಣ

## ಮತ್ತು

# ರಚನೆ



ಲೇಖಕ :

ಚಿಕ್ಕನರಸಿಂಹಯ್ಯ, ಸಾಹಿತ್ಯ ವಿಶಾರದ, ಶಿಕ್ಷಕ್

ಹಿಂದೀ ಅಧ್ಯಾಪಕ, ಮಹಾರಾಜಾ ಹೈಸ್ಕೂಲು, ಮೈಸೂರು.

ಮುನ್ನುಡಿಕಾರರು :

ಶ್ರೀ ಹೆಚ್. ಸಿ. ದಾಸಪ್ಪ, B.A., LL.B., M.P.

ಅಧ್ಯಕ್ಷರು, ಮೈಸೂರು ರಿಯಾಸತ್ ಹಿಂದೀ ಪ್ರಚಾರ ಸಮಿತಿ, ಬೆಂಗಳೂರು

ಬೆಲೆ : 75 ನ.ಪೈ.

## ಮೆಚ್ಚುನುಡಿ

ಶ್ರೀ ಚಿಕ್ಕನರಸಿಂಹಯ್ಯನವರು ಬರೆದಿರುವ ಈ ಹಿಂದೀ ಸರಳ ವ್ಯಾಕರಣವನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಈ ಪುಸ್ತಕವು ಹಿಂದೀ ಭಾಷೆಯ ಪ್ರಾಥಮಿಕ ಜ್ಞಾನವನ್ನು ಸಂಪಾದಿಸಲಿಚ್ಛಿಸುವ ವಿದ್ಯಾರ್ಥಿಗಳಿಗೆ ಬಹಳ ಉಪಯುಕ್ತವಾದುದಾಗಿದೆ. ಅದರಲ್ಲೂ ಹಿಂದಿಯನ್ನು ಒತ್ತಾಯಪಾಠ (Compulsory)ವಾಗಿ ಓದುವ ವಿದ್ಯಾರ್ಥಿಗಳಿಗೆ ಇದರಿಂದ ಬಹುಮಟ್ಟಿನ ಸಹಾಯವಾಗುತ್ತದೆ. ಕಡಿಮೆ ಬೆಲೆಯ ಈ ವ್ಯಾಕರಣವು ಕನ್ನಡ ಭಾಷೆಯು ಬಳಕೆಯಲ್ಲಿರುವ ಪ್ರದೇಶಗಳಲ್ಲಿ ಹಿಂದೀ ಭಾಷೆಯ ಪ್ರಚಾರಕ್ಕೆ ಹೆಚ್ಚಿನ ಸಹಾಯವಾಗುತ್ತದೆಂದು ನಾನು ಆಶಿಸುತ್ತೇನೆ.

ಹೆಚ್. ಸಿ. ದಾಸಪ್ಪ,

ಬೆಂಗಳೂರು
6-8-52

ಅಧ್ಯಕ್ಷರು, ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ
ಮತ್ತು ಮೈಸೂರು ರಿಯಾಸತ್ ಹಿಂದೀ ಪ್ರಚಾರಸಮಿತಿ.

## ಎರಡನೆಯ ಪರಿಷ್ಕೃತ ಮುದ್ರಣ

ಈ ಸರಳ ವ್ಯಾಕರಣ ಪುಸ್ತಕವನ್ನು ಮೈಸೂರು ಸಂಸ್ಥಾನದ ಹೈಸ್ಕೂಲಿನ ಮೂರು ತರಗತಿಗಳ ಕಂಪಲ್ಸರಿ ಹಿಂದೀ ವಿಭಾಗಕ್ಕೆ 1954-55 ಮತ್ತು 55-56ನೇ ವರ್ಷದ ವ್ಯಾಕರಣ ವಿಷಯದ ವ್ಯಾಸಂಗ ಪುಸ್ತಕವನ್ನಾಗಿ ನಿಯಮಿಸಿರುವ ಹಿಂದೀ ಟೆಕ್ಸ್ಟ್ ಬುಕ್ ಕಮಿಟಿಯವರಿಗೂ ಮತ್ತು ನಮ್ಮ ಮಾನ್ಯ ಡಿ.ಪಿ.ಐ. ಸಾಹೇಬರವರಿಗೂ ನಾನು ಚಿರಋಣಿ.

ಪುಸ್ತಕ ಪರಿಷ್ಕೃತ ಕಾರ್ಯದಲ್ಲಿ ನೆರವು ನೀಡಿದ ನನ್ನ ಸ್ನೇಹಿತರುಗಳಿಗೂ ಮುಖ್ಯವಾಗಿ ಮಹಾರಾಜಾ ಕಾಲೇಜು ಹಿಂದೀ ಲೆಕ್ಚರರ್ ಆದ ಶ್ರೀ ಎಂ. ದೇವೇಗೌಡ ಎಂ.ಎ. ಯವರಿಗೂ ನಾನು ಕೃತಜ್ಞನಾಗಿದ್ದೇನೆ. ಸಕಾಲದಲ್ಲಿ ಮುದ್ರಣಕಾರ್ಯವನ್ನು ಅಂದವಾಗಿ ಪೂರ್ತಿಗೊಳಿಸಿ ಸಹಕರಿಸಿದ ಶ್ರೀ ಜಿ. ಎಚ್. ರಾಮರಾವ್, ಬಿ.ಎಸ್‌ಸಿ. ಯವರಿಗೆ ನನ್ನ ಅನಂತ ಧನ್ಯವಾದಗಳು.

ಮಂಡ್ಯ
1-6-54

ಚಿನ

## ಪರಿಷ್ಕೃತ ಮೂರನೆಯ ಮುದ್ರಣ

ಹತ್ತು ವರ್ಷಗಳ ಹಿಂದೆ ಕಂಪಲ್ಸರಿ ಹಿಂದೀ ಸರಳ ವ್ಯಾಕರಣವೆಂಬ ಒಂದು ಚಿಕ್ಕ ಹೊತ್ತಿಗೆಯನ್ನು ಅಚ್ಚುಹಾಕಿಸಿದ್ದೆನು. ಅಂದು ಶಾಲೆಗಳಲ್ಲಿ ನಾನು ಕೈಗೊಂಡಿದ್ದ ಪೂರ್ವಭಾವಿಸಿದ್ಧತೆಯ ಪಾಠದ ಟಿಪ್ಪಣಿ ಹಾಗೂ ಕನ್ನಡ ನಾಡಿನ ಮಕ್ಕಳು ಹಿಂದೀ ಕಲಿಯುವ ಧಾಟಿಗನುಗುಣವಾಗಿ ಕನ್ನಡ ಮಾಧ್ಯಮದಲ್ಲಿ ಹಿಂದೀ ವ್ಯಾಕರಣಾಂಶವನ್ನು ಸರಳಗೊಳಿಸಿ ಬೋಧನೆಗನುಕೂಲವಾಗುವಂತೆ ಬರೆಯ ಬೇಕೆಂಬ ಹಿರಿಯ ಹಂಬಲದಿಂದ ಆ ಕಾರ್ಯದಲ್ಲಿ ಪ್ರವೃತ್ತನಾದೆನು. ಅಂದು ಅಚ್ಚು ಹಾಕಿಸಿದ್ದ ಪ್ರತಿಗಳೆಲ್ಲವೂ ಕೇವಲ ಒಂದು ತಿಂಗಳೊಳಗೆ ಮುಗಿದು ಹೋದುದಿರಲಿ, ಮುಂದಿನ ವರ್ಷ ಇಡೀ ಸಂಸ್ಥಾನದ ಹೈಸ್ಕೂಲಿನ ಮೂರೂ ತರಗತಿಗಳಿಗೆ ಅದು ವ್ಯಾಕರಣದ ಟೆಕ್ಸ್ಟ್ ಬುಕ್ ಆಗಿ ಸರ್ಕಾರದ ಮನ್ನಣೆಯನ್ನು ಗಳಿಸಿತು.

ಹಲವು ವರ್ಷಗಳ ನಂತರ ಹಿಂದೀ ಬೋಧನಾಕ್ರಮದ ಅನುಭವ ಹೆಚ್ಚಿದ ಮೇಲೆ ಹಾಗೂ ಹಿಂದೀ ಶಿಕ್ಷಕ್ ಟ್ರೈನಿಂಗ್ ಪಡೆದ ಮೇಲೆ ಅದರ ಪರಿಷ್ಕೃತ ಕಾರ್ಯವನ್ನು ಕೈಗೊಳ್ಳಬೇಕೆಂಬ ಬಹಳ ದಿನಗಳ ಆಸೆ ಇಂದು ಫಲಿಸಿದೆ. ಅಂದಿನ ಪ್ರಚೋದನೆಯ ತಿರುಳಿಗಿಂತ ಇಂದಿನದು ತೀರಾ ಭಿನ್ನವಾಗಿದ್ದು ವಿಧಾನಾತ್ಮಕ ವಾಗಿದೆ. ಅಂದು ವ್ಯಾಕರಣಾಂಶವನ್ನು ಮಕ್ಕಳಿಗೆ ಕಲಿಸುವಾಗ ಮೊದಲು ನಿಯಮ ಗಳನ್ನು ಕ್ರೋಢೀಕರಿಸಿ ಹೇಳಿ ಅನಂತರ ಉದಾಹರಣೆಗಳ ಕಡೆಗೆ ಹೊರಳಿಸುತ್ತಿದ್ದ ದೃಷ್ಟಿ ಇಂದು ದೂರವಾಗಿದೆ. ಅಂತೆಯೇ ಈ ಪರಿಷ್ಕರಣ ಕಾರ್ಯದಲ್ಲಿ ಉದಾ ಹರಣೆಗಳ ಮೂಲಕ ವಿಷಯವನ್ನು ಸ್ಪಷ್ಟಪಡಿಸಿ ಒಂದು ಸಾಮಾನ್ಯ ನಿಯಮವನ್ನು ಮಕ್ಕಳೇ ನಿರ್ದೇಶಿಸುವಂತಹ ರಚನಾಕ್ರಮವನ್ನು ಅಳವಡಿಸಲಾಗಿದೆ. ಇಲಾಖೆಯ ಹೊಸ ಸಿಲಬಸ್ ಅನುಸರಿಸಿ ಪ್ರೈಮರಿ 6, 7, ಸ್ಟ್ಯಾಂಡರ್ಡ್‌ಗಳ ಹಾಗೂ ಹೈಸ್ಕೂಲಿನ 8, 9, 10 ನೆ ಸ್ಟ್ಯಾಂಡರ್ಡ್‌ಗಳ ಮತ್ತು T. C H, T. C. L ಗಳ ಕಂಪಲ್ಸರಿ ಹಿಂದೀ ವ್ಯಾಕರಣ ಮತ್ತು ವಾಕ್ಯರಚನೆಗೆ ಸಂಬಂಧಿಸಿದ ವಿಷಯಗಳನ್ನು ವಿದ್ಯಾರ್ಥಿಗಳ ಕಲಿಯುವಿಕೆಯ, ಮತ್ತು ಅಭ್ಯಾಸದ ದೃಷ್ಟಿಯನ್ನಿಟ್ಟು ಸೇರಿಸಲಾಗಿದೆ. ತಜ್ಞರೂ, ಪ್ರಾಜ್ಞರೂ, ಅನುಭವಿಗಳೂ ಆದ ಹಿಂದೀ ಶಿಕ್ಷಕರು ಈ ಹೊತ್ತಿಗೆಯ ಉಪಯೋಗಗಳನ್ನು ಮನಗಂಡಿದ್ದಾದರೆ ನನ್ನ ಈ ಪರಿಶ್ರಮವು ಸಾರ್ಥಕವಾಯಿತೆಂದು ಭಾವಿಸುತ್ತೇನೆ. ನುರಿತ ಹಿಂದೀ ಅಧ್ಯಾಪಕರ ಮತ್ತು ವಿದ್ಯಾಪ್ರೇಮಿಗಳ ಸಂದೇಶ ವನ್ನೂ ಸ್ವಾಗತಿಸುತ್ತೇನೆ.

ಮಾನ್ಯ ಮಾಜಿ ಮಂತ್ರಿಗಳೂ, ಮೈಸೂರು ರಿಯಾಸತ್ ಹಿಂದೀ ಪ್ರಚಾರ ಸಮಿತಿಯ ಅಧ್ಯಕ್ಷರೂ ಮತ್ತು ಲೋಕ ಸಭೆಯ ಸದಸ್ಯರೂ ಆದ ಶ್ರೀಮಾನ್ H. C. ದಾಸಪ್ಪ, B.A ; L.L.B.M.P. ರವರು ಮೆಚ್ಚು ನುಡಿಯಿಂದ ಹರಸಿ ಪ್ರೋತ್ಸಾಹ ನೀಡಿದ್ದಾರೆ. ಅವರಿಗೂ ಕರಡುಪ್ರತಿಯನ್ನು ಓದಿ ನೋಡಿ ಅತ್ಯಮೂಲ್ಯ ಸಲಹೆಗಳನ್ನು ನೀಡಿದ ಶ್ರೀ. ಜಿ. ಸಚ್ಚಿದಾನಂದ ರವರಿಗೂ ನನ್ನ ಅಭಿನಂದನೆಗಳು.

10–7–1963 ಚಿನ

ಮೈಸೂರು

# ಮೈಸೂರು ವಿದ್ಯಾಭ್ಯಾಸ ಇಲಾಖೆಯಿಂದ ಅಂಗೀಕೃತವಾದ 62-63 ಮತ್ತು 63-64ರ ಸಿಲಬಸ್

## ಪ್ರಾಥಮಿಕ ಆರನೆಯ ತರಗತಿಗೆ

1 ನಾಮಪದ—2 ಲಿಂಗ--3 ವಚನ—4 ವಿಭಕ್ತಿ ಪ್ರತ್ಯಯಗಳು (ಕಾರಕ ಚಿಹ್ನೆ) 5 ಸರ್ವನಾಮ, ಪುರುಷವಾಚಕ :— ಉತ್ತಮ, ಮಧ್ಯಮ, ಅನ್ಯ — ನಿಶ್ಚಯ ವಾಚಕಸರ್ವನಾಮ—6 ಕಾಲಗಳ ಪ್ರಯೋಗ, ವರ್ತಮಾನ ಕಾಲ, ಭೂತಕಾಲ, ಭವಿಷ್ಯತ್ಕಾಲ—7 (1) ಯೋಜಕ (ಸಮುಚ್ಚಯ ಬೋಧಕ) (2) ವಿಸ್ಮಯಾದಿ ಬೋಧಕ.

## ಪ್ರಾಥಮಿಕ ಏಳನೆಯ ತರಗತಿಗೆ

1 ಪುನರಾವರ್ತನೆ—2 ನಾಮಪದ ಮುಂದುವರಿಯುವಿಕೆ—3 ಲಿಂಗ ಮತ್ತು ವಚನ ಮುಂದುವರಿಯುವಿಕೆ—4 ಸರ್ವನಾಮಗಳು—ಸಂಬಂಧ ವಾಚಕ ಸರ್ವನಾಮ, ಪ್ರಶ್ನವಾಚಕ ಸರ್ವನಾಮ, ಅನಿಶ್ಚಯ ವಾಚಕ ಸರ್ವನಾಮ—5 ವಿಶೇಷಣ— 6 ಸಂಯುಕ್ತ ಕ್ರಿಯೆಗಳ ಪ್ರಯೋಗ—7 ಚಾಹಿಯೆ ಪ್ರಯೋಗ—8 ಕಾಲಗಳ ಮುಂದುವರಿಯುವಿಕೆ — 9 ಕ್ರಿಯಾ ವಿಶೇಷಣ — 10 ವಾಕ್ಯಾಂಶಗಳು ಮತ್ತು ವಾಗ್ಧಾರೆಗಳು—11 ಕರ್ತೃವಾಚ್ಯ, ಕರ್ಮವಾಚ್ಯ—12 ವಾಕ್ಯಭೇದಗಳು, ಸರಲವಾಕ್ಯ, ಮಿಶ್ರಿತ ವಾಕ್ಯ, ಸಂಯುಕ್ತ ವಾಕ್ಯ.

## ಹೈಸ್ಕೂಲ್ ಎಂಟನೆಯ ತರಗತಿಗೆ

Applied Grammar :—ವಾಕ್ಯಾಂಶಗಳು, ವಾಗ್ಧಾರೆಗಳು, ಸಾಧಾರಣವಾಗಿರುವ ವ್ಯವಹಾರದ ಪರಿಚಯ—1 ನಾಮಪದ—2 ವಚನಗಳು—3 ಸರ್ವನಾಮಗಳು ಮತ್ತು ಅವುಗಳ ಭೇದಗಳು—4 ಕ್ರಿಯಾ ವಿಶೇಷಣ—5 ವಿಶೇಷಣ—6 ಸಮುಚ್ಚಯ ಬೋಧಕ—7 ವಿಭಕ್ತಿ ಪ್ರತ್ಯಯಗಳು.

## ಹೈಸ್ಕೂಲ್ ಒಂಬತ್ತನೆಯ ತರಗತಿಗೆ

1 ಕ್ರಿಯಾಪದ—2 ವಿಧಿರೂಪ—3 ಕಾಲಗಳ ಪರಿಚಯ— 4 ಸಂಯುಕ್ತ ಕ್ರಿಯೆ— 5 ಪ್ರಯೋಗ—6 ಭವಿಷ್ಯತ್ಕಾಲದ ರೂಪಗಳು—7 ಭೂತಕಾಲದ ರೂಪಗಳು.

## ಹೈಸ್ಕೂಲ್ ಹತ್ತನೆಯ ತರಗತಿಗೆ

1 ಸಹಾಯಕ ಕ್ರಿಯೆಗಳ ಪ್ರಯೋಗ—2 ಸಂಯುಕ್ತ ಕ್ರಿಯೆಗಳ ಪ್ರಯೋಗ— 3 ಚಾಹ್ ಮತ್ತು ಚಾಹಿಯೆಗಳ ಪ್ರಯೋಗ—4 ವಾಚ್ಯಗಳು ಅವುಗಳ ಭೇದಗಳ ಪ್ರಯೋಗ—5 ನಿತ್ಯತಾ ಬೋಧಕಗಳು—6 ಕರನಾ, ಹೋನಾಗಳ ಪ್ರಯೋಗ— 7 ಸಾಮಾನ್ಯ ಪರಿಚಯ—8 ಹಿಂದಿಯಲ್ಲಿ ಬಳಕೆಯಲ್ಲಿರುವ ವ್ಯಾಕರಣದ ವಿವಿಧ ಪ್ರಯೋಗಗಳು— 9 ಪುನರಾವರ್ತನೆ—ಇತ್ಯಾದಿ.

## ಟಿ. ಸಿ. ಎಚ್. ಮತ್ತು ಟಿ. ಸಿ. ಎಲ್.

ಈ ಸಿಲಬಸ್‌ನ ಎಲ್ಲಾ ವ್ಯಾಕರಣಾಂಶಗಳೂ ಈ ಮೇಲಿನ ಸಿಲಬಸ್ ಭಾಗಗಳಲ್ಲಿಯೇ ಅಡಕವಾಗಿವೆ. ಆ ಕಾರಣ ಪುನಃ ಅಲಾಯಿದಾ ಅವನ್ನು ಬರೆದಿಲ್ಲ.

# विषय सूची ವಿಷಯ ಸೂಚಿಕೆ

# ಜೈ ಹಿಂದ್
# ಕಂಪಲ್ಸರಿ ಹಿಂದೀ ವ್ಯಾಕರಣ ಮತ್ತು ರಚನೆ

---

## 1. अक्षरमाला (ವರ್ಣಮಾಲೆ)
## (*LETTERS*)

स्वर ಸ್ವರ

| ಅ | ಆ | ಇ | ಈ | ಉ | ಊ |
|---|---|---|---|---|---|
| अ | आ | इ | ई | उ | ऊ |

| ಋ | ಏ | ಐ | ಓ | ಔ |
|---|---|---|---|---|
| ऋ | ए | ऐ | ओ | औ |

योगवाह ಯೋಗವಾಹಗಳು

| ಅಂ | ಅಃ |
|---|---|
| अं | अः |

## व्यंजन ವ್ಯಂಜನಗಳು

| ಕ | ಖ | ಗ | ಘ | ಙ |
|---|---|---|---|---|
| क | ख | ग | घ | ङ |
| ಚ | ಛ | ಜ | ಝ | ಞ |
| च | छ | ज | झ | ञ |
| ಟ | ಠ | ಡ | ಢ | ಣ |
| ट | ठ | ड | ढ | ण |
| ತ | ಥ | ದ | ಧ | ನ |
| त | थ | द | ध | न |
| ಪ | ಫ | ಬ | ಭ | ಮ |
| प | फ | ब | भ | म |

| ಯ | ರ | ಲ | ವ | ಶ | ಷ | ಸ | ಹ |
|---|---|---|---|---|---|---|---|
| य | र | ल | व | श | ष | स | ह |

ಹಿಂದೀ ಭಾಷೆಯಲ್ಲಿ ಬಳಕೆಯಲ್ಲಿರುವ ಅಕ್ಷರಗಳು 46. ಅಕ್ಷರವನ್ನು ವರ್ಣವೆಂದೂ ಕರೆಯುತ್ತಾರೆ. ಹಿಂದೀ ಭಾಷೆಯನ್ನು ದೇವನಾಗರಿ ಲಿಪಿಯಲ್ಲಿ ಬರೆಯುತ್ತಾರೆ. ಸಂಸ್ಕೃತ ಭಾಷೆ ಮತ್ತು ಮರಾಠಿ ಭಾಷೆಗಳೂ ಸಹ ಇದೇ ಲಿಪಿಯಲ್ಲಿ ಬರೆಯಲ್ಪಡುತ್ತವೆ.

ಅಕ್ಷರಗಳಲ್ಲಿ ಸ್ವರ, ವ್ಯಂಜನ, ಯೋಗವಾಹ ಎಂದು 3 ವಿಧ.

ಈ ಅಕ್ಷರಗಳನ್ನು ಗುರ್ತಿಸಿ ಮತ್ತು ಪುನಃ ಪುನಃ ಬರೆದು ಅಭ್ಯಾಸ ಮಾಡಿರಿ :

अ उ आ ऊ

ओ अं औ अः

इ ई ङ भ ड ह

ख स भ म

ग ण त न

घ छ थ ध म

ट ठ ढ द

प ष फ ब

च ज झ

ऋ ए ऐ र ल श

## ಅಭ್ಯಾಸ

ಈ ಪದಗಳನ್ನು ಓದಿರಿ ಮತ್ತು ಪುನಃ ಪುನಃ ಬರೆದು ಅಭ್ಯಾಸ ಮಾಡಿರಿ :

| | | |
|---|---|---|
| अब ಅಬ್ | खल ಖಲ್ | धन ಧನ್ |
| आम ಆಮ್ | गडबड ಗಡ್‌ಬಡ್ | नरम ನರಮ್ |
| इधर ಇಧರ್ | घन ಘನ್ | पर ಪರ್ |
| ईख ಈಖ್ | चर ಚರ್ | फल ಫಲ್ |
| उधर ಉಧರ್ | छल ಛಲ್ | बस ಬಸ್ |
| ऊखल ಊಖಲ್ | जन ಜನ್ | भनक ಭನಕ್ |
| ऋण ಋಣ್ | झनक ಝನಕ್ | मसनद ಮಸ್‌ನದ್ |
| एक ಏಕ್ | टल ಟಲ್ | यश ಯಶ್ |
| ऐनक ಐನಕ್ | ठग ಠಗ್ | रग ರಗ್ |
| ओस ಓಸ್ | डर ಡರ್ | लगभग ಲಗ್‌ಭಗ್ |
| औरत ಔರತ್ | ढक ಢಕ್ | शर ಶರ್ |
| अंदर ಅಂದರ್ | तक ತಕ್ | षण ಷಣ್ |
| अंतःकरण ಅಂತಃಕರಣ್ | थल ಥಲ್ | सब ಸಬ್ |
| कमल ಕಮಲ್ | दल ದಲ್ | हम ಹಮ್ |

ಶಬ್ದಗಳ ಕೊನೆಯ ವ್ಯಂಜನವು ಅಕಾರಾಂತವಾಗಿದ್ದರೆ ಅದನ್ನು ಅರ್ಧಾಕ್ಷರದಂತೆ ಭಾವಿಸಿ ಉಚ್ಚರಿಸಬೇಕು.

ಮೂರಕ್ಷರಗಳುಳ್ಳ ಶಬ್ದದ ಕೊನೆಯ ಎರಡು ವ್ಯಂಜನಗಳು ಹ್ರಸ್ವವಾಗಿದ್ದರೆ ಎರಡನೆಯ ವ್ಯಂಜನವನ್ನು ಅರ್ಧಾಕ್ಷರವಾಗಿ ಉಪಯೋಗಿಸಬೇಕು.

ನಾಲ್ಕಕ್ಷರಗಳುಳ್ಳ ಶಬ್ದದಲ್ಲಿ ಎರಡನೆಯ ಮತ್ತು ನಾಲ್ಕನೆಯ ಅಕ್ಷರಗಳು ಹ್ರಸ್ವ ವ್ಯಂಜನಗಳಾಗಿದ್ದರೆ ಆ ಅಕ್ಷರಗಳನ್ನು ಅರ್ಧಾಕ್ಷರಗಳಂತೆ ಉಚ್ಚರಿಸಬೇಕು.

## 2. बारहखडी ಕಾಗುಣಿತ

अ आ इ ई उ ऊ ऋ ए ऐ ओ औ अं अः

– ा ि ी ु ू ृ े ै ो ौ ं ः

क का कि की कु कू कृ के कै को कौ कं कः

र रा रि री रु रू रे रै रो रौ रं रः

ವ್ಯಂಜನಗಳಿಗೆ ಸ್ವರಗಳು ಸೇರಿ ಆಗುವ ಅಕ್ಷರಗಳು ಕಾಗುಣಿತ ಅಕ್ಷರಗಳು. (बारहखडी)

ಕನ್ನಡದಂತೆಯೇ ಹಿಂದಿಯಲ್ಲಿಯೂ ವ್ಯಂಜನಗಳಿಗೆ ಸ್ವರಗಳ ಬದಲು ಸ್ವರಚಿಹ್ನೆ (मात्रा) ಗಳನ್ನು ಸೇರಿಸಿ ಬರೆಯುವುದು ರೂಢಿಯಲ್ಲಿದೆ.

### ಅಭ್ಯಾಸ

*a*) ಮೇಲೆ ಬರೆದಿರುವಂತೆ ಉಳಿದ ಎಲ್ಲಾ ಅಕ್ಷರಗಳಿಗೂ ಸ್ವರಚಿಹ್ನೆ ಹತ್ತಿಸಿ ಬರೆಯಿರಿ.

*b*) ಈ ಕೆಳಗಿನ ಪದಗಳನ್ನು ಓದಿರಿ ಮತ್ತು ಪುನಃ ಪುನಃ ಬರೆದು ಅಭ್ಯಾಸಮಾಡಿರಿ:

राम ರಾಮ್ | गुरु ಗುರು | हैदर ಹೈದರ್
माला ಮಾಲಾ | रूमाल ರೂಮಾಲ್ | पैसा ಪೈಸಾ
दिन ದಿನ್ | भूपाल ಭೂಪಾಲ್ | तोड ತೋಡ್
किताब ಕಿತಾಬ್ | कृपा ಕೃಪಾ | कौन ಕೌನ್
गाडी ಗಾಡೀ | अनृत ಅನೃತ್ | खिलौना ಖಿಲೌನಾ
इडली ಇಡಲೀ | पेड ಪೇಡ್ | हँस ಹಁಸ್
कुली ಕುಲೀ | केला ಕೇಲಾ | मंदिर ಮಂದಿರ್

## 3. संयुक्ताक्षर ಸಂಯುಕ್ತಾಕ್ಷರ

**ಒಂದನೆಯ ಕ್ರಮ** :—ಕಡೆಯಲ್ಲಿ ನೇರವಾಗಿ ಗೀಟುಳ್ಳ ವ್ಯಂಜನ ಗಳು :

ख + त = ख्त ಖ್ತ  बख्तर ಬಖ್ತರ್
ग + य = ग्य ಗ್ಯ  भाग्य ಭಾಗ್ಯ
ज + व = ज्व ಜ್ವ  ज्वाला ಜ್ವಾಲಾ
न + म = न्म ನ್ಮ  सन्मान ಸನ್ಮಾನ್
प + य = प्य ಪ್ಯ  प्यारा ಪ್ಯಾರಾ
ब + य = ब्य ಬ್ಯ  ब्याह ಬ್ಯಾಹ್
म + ल = म्ल ಮ್ಲ  म्लान ಮ್ಲಾನ್
स + त = स्त ಸ್ತ  पुस्तक ಪುಸ್ತಕ್

ಒಂದು ವ್ಯಂಜನಕ್ಕೆ ಇನ್ನೊಂದು ವ್ಯಂಜನವು ಸೇರಿ ಆಗುವ ಅಕ್ಷರವೇ ಒತ್ತಕ್ಷರ.

ಒತ್ತಕ್ಷರಗಳನ್ನು 5 ರೀತಿಯಲ್ಲಿ ಬರೆಯಬಹುದು. ಒಂದನೆಯ ರೀತಿಯ ಮೇಲಿನ ಉದಾಹರಣೆಗಳನ್ನು ನೋಡಿರಿ.

**ನಿಯಮ** :—ಕಡೆಯಲ್ಲಿ ನೇರವಾಗಿ ಗೀಟುಳ್ಳ ವ್ಯಂಜನಾಕ್ಷರಕ್ಕೆ ಇನ್ನೊಂದು ಯಾವುದಾದರೂ ವ್ಯಂಜನಾಕ್ಷರವನ್ನು ಸೇರಿಸುವಾಗ ಆ ಕಡೆಯ ನೇರವಾದ ಗೀಟನ್ನು ಬರೆಯದೆ ಅದರ ಸ್ಥಳದಲ್ಲಿ ಸೇರಿಸುವ ವ್ಯಂಜನವನ್ನು ಬರೆಯಬೇಕು.

**ಎರಡನೆಯ ಕ್ರಮ** :—ಕಡೆಯಲ್ಲಿ ನೇರವಾಗಿ ಗೀಟಿಲ್ಲದ ವ್ಯಂಜನ ಗಳು :

क + क = क्क ಕ್ಕ टक्कर ಟಕ್ಕರ್
ट + ट = ट्ट ಟ್ಟ टट्टी ಟಟ್ಟೀ
ड + ड = ड्ड ಡ್ಡ हड्डी ಹಡ್ಡೀ
द + द = द्द ದ್ದ गद्दी ಗದ್ದೀ

ನಿಯಮ :—ಕಡೆಯಲ್ಲಿ ನೇರವಾಗಿ ಗೀಟಿಲ್ಲದ ವ್ಯಂಜನಾಕ್ಷರಕ್ಕೆ ಇನ್ನೊಂದು ಅದೇ ತರಹದ ವ್ಯಂಜನವನ್ನು ಸೇರಿಸುವಾಗ ಮೊದಲನೆಯದರ ಕೆಳಗೆ ಎರಡನೆಯದನ್ನು ಬರೆಯಬೇಕು.

द + म = द्म ದ್ಮ पद्म ಪದ್ಮ
ड + ग = ड्ग ಡ್ಗ खड्ग ಖಡ್ಗ

ಕೆಲವು ಸಂದರ್ಭಗಳಲ್ಲಿ ಮೊದಲನೆಯ ವ್ಯಂಜನದ ಕೆಳಗೆ ( ् ) ಈ ಚಿಹ್ನೆಯನ್ನು ಹಾಕಿ ಸೇರಿಸಬೇಕಾಗಿರುವ ಎರಡನೆಯ ವ್ಯಂಜನವನ್ನು ಅದರ ಮುಂದೆ ಬರೆಯಬೇಕು.

ಮೂರನೆಯ ಕ್ರಮ :—ಅರ್ಕಾವತ್ತು

र + म = र्म ರ್ಮ धर्म ಧರ್ಮ
र + ग = र्ग ರ್ಗ सर्ग ಸರ್ಗ
र + व = र्व ರ್ವ पार्वती ಪಾರ್ವತಿ
र + प = र्प ರ್ಪ सर्प ಸರ್ಪ

र ಕಾರವು (ರೇಫವು) ಒತ್ತಕ್ಷರದ ಮೊದಲನೆಯ ಅಕ್ಷರವಾಗಿದ್ದರೆ ಎರಡನೆಯ ಅಕ್ಷರದ ಮೇಲೆ ( ` ) ಈ ರೀತಿಯ ಚಿಹ್ನೆಯನ್ನು ಬರೆಯಬೇಕು. ಇದನ್ನು ಕನ್ನಡದಲ್ಲಿ ಅರ್ಕಾವತ್ತು (ರ್) ಎಂದು ಕರೆಯುವ ವಾಡಿಕೆ.

ನಾಲ್ಕನೆಯ ಕ್ರಮ :—'ರ' ವತ್ತು.

क + र = क्र ಕ್ರ क्रम ಕ್ರಮ್
प + र = प्र ಪ್ರ प्रजा ಪ್ರಜಾ
ग + र = ग्र ಗ್ರ अग्र ಅಗ್ರ
द + र = द्र ದ್ರ निद्रा ನಿದ್ರಾ

ನಿಯಮ :—र ಕಾರವು (ರೇಫವು) ಒತ್ತಕ್ಷರದ ಎರಡನೆಯ ಅಕ್ಷರವಾಗಿದ್ದರೆ ಮೊದಲನೆಯದರ ಕೆಳಗೆ ( / ) ಈ ಚಿಹ್ನೆಯನ್ನು ಬರೆಯಬೇಕು.

ट + र = ट्र ಟ್ರ ट्राम ಟ್ರಾಮ್
ड + र = ड्र ಡ್ರ ड्रामा ಡ್ರಾಮಾ

ಟ, ಠ, ಡ, ಢ ಈ ಅಕ್ಷರಗಳಿಗೆ ಮಾತ್ರ 'र' ಒತ್ತನ್ನು ಸೇರಿಸುವಾಗ ಅವುಗಳ ಕೆಳಗೆ (^)ಈ ರೀತಿಯ ಮೇಲೊಗ್ಮದ ಚಿಹ್ನೆಯನ್ನು ಬರೆಯಬೇಕು.

ಐದನೆಯ ಕ್ರಮ :—ಯಾವ ನಿಯಮಕ್ಕೂ ಒಳಪಡದ ಒತ್ತಕ್ಷರಗಳು.

क + त = क्त ಕ್ತ रक्त ರಕ್ತ
क + ष = क्ष ಕ್ಷ मोक्ष ಮೋಕ್ಷ
ज + ञ = ज्ञ ಜ್ಞ ज्ञान ಜ್ಞಾನ್
त + त = त्त ತ್ತ वित्त ವಿತ್ತ
त + र = त्र ತ್ರ मित्र ಮಿತ್ರ
द + ध = द्ध ದ್ಧ बुद्धि ಬುದ್ಧಿ
श + र = श्र ಶ್ರ श्रम ಶ್ರಮ್
द + य = द्य ದ್ಯ विद्या ವಿದ್ಯಾ

ನಿಯಮ :—ಇಂತಹ ಕೆಲವು ಒತ್ತಕ್ಷರಗಳು ಹಿಂದೀ ಭಾಷೆಯಲ್ಲಿ ಬಳಕೆಯಲ್ಲಿವೆ. ಅವು ಒಂದು ನಿಯಮಕ್ಕೆ ಒಳಪಡುವುದಿಲ್ಲ. ಆದಕಾರಣ ಆ ಅಕ್ಷರಗಳನ್ನೇ ಕಲಿತುಕೊಳ್ಳುವುದು ಒಳ್ಳೆಯದು.

## 4. शब्दों का वर्गीकरण ಶಬ್ದಗಳ ಬಗೆಗಳು

ಶಬ್ದಗಳು 2 ವಿಧ: *A* ವಿಕಾರಿ ಶಬ್ದಗಳು, *B* ಅವಿಕಾರಿ ಶಬ್ದಗಳು.

### *A.* विकारी शब्द ವಿಕಾರಿ ಶಬ್ದಗಳು




### *B.* अविकारी शब्द ಅವಿಕಾರಿ ಶಬ್ದಗಳು (ಅವ್ಯಯಗಳು)




ಹಿಂದೀ ಭಾಷೆಯ ಶಬ್ದಗಳನ್ನು ವಾಕ್ಯಗಳಲ್ಲಿ ಪ್ರಯೋಗಿಸುವಾಗ ಅವು ಹೊಂದುವ ರೂಪಪರಿವರ್ತನೆಯ ದೃಷ್ಟಿಯಿಂದ ಮುಖ್ಯವಾಗಿ ಎರಡು ಗುಂಪುಗಳಾಗಿ ವಿಂಗಡಿಸಬಹುದು. *A.* ವಿಕಾರಿ ಶಬ್ದಗಳು *B.* ಅವಿಕಾರಿ ಶಬ್ದಗಳು (ಅವ್ಯಯಗಳು).

**सूचना :**—ವಿಕಾರಿ ಶಬ್ದಗಳು ಲಿಂಗ, ವಚನ, ವಿಭಕ್ತಿ, ಕಾಲ, ಮತ್ತು ಪ್ರಯೋಗ ಮೊದಲಾದ ಲಕ್ಷಣಗಳಿಂದ ತಮ್ಮ ರೂಪದ ಬದಲಾವಣೆಗಳನ್ನು ಹೊಂದುತ್ತವೆ. ಅವಿಕಾರಿ ಶಬ್ದಗಳು (ಅವ್ಯಯಗಳು) ಈ ಯಾವ ರೂಪ ಬದಲಾವಣೆಗಳನ್ನೂ ಹೊಂದದೆ ಇದ್ದ ರೂಪದಲ್ಲಿಯೇ ವಾಕ್ಯಗಳಲ್ಲಿ ಪ್ರಯೋಗಿಸಲ್ಪಡುತ್ತವೆ.

# *A.* विकारी शब्द ವಿಕಾರಿ ಶಬ್ದಗಳು

## 1. संज्ञा ನಾಮಪದ *NOUN*

| 1 | | 2 | | 3 | |
|---|---|---|---|---|---|
| घर | ಮನೆ | मोहन | ಮೋಹನ | आनंद | ಆನಂದ |
| फल | ಹಣ್ಣು | ललिता | ಲಲಿತಾ | संतोष | ಸಂತೋಷ |
| फूल | ಹೂವು | रमेश | ರಮೇಶ | दुःख | ದುಃಖ |
| किताब | ಪುಸ್ತಕ | लीला | ಲೀಲಾ | झूठ | ಸುಳ್ಳು |
| कलम | ಲೇಖಣಿ | सतीश | ಸತೀಶ | सच | ನಿಜ |
| चरखा | ಚರಕ | गायत्री | ಗಾಯತ್ರೀ | पाप | ಪಾಪ |
| झंडा | ಬಾವುಟ | गणेश | ಗಣೇಶ | पुण्य | ಪುಣ್ಯ |
| लडका | ಹುಡುಗ | मैसूर | ಮೈಸೂರು | प्रेम | ಪ್ರೇಮ |
| मेज | ಮೇಜು | गंगा | ಗಂಗೆ | बुद्धि | ಬುದ್ಧಿ |
| दवात | ಮಸಿಕುಡಿಕೆ | हिमालय | ಹಿಮಾಲಯ | समझ | ತಿಳಿವಳಿಕೆ |

**ನಿಯಮ :**—ಯಾವುದಾದರೂ ಒಂದು ವಸ್ತು ಅಥವಾ ಪದಾರ್ಥ, ಮನುಷ್ಯ, ಸ್ಥಳ ಇಲ್ಲವೆ ಧರ್ಮದ ಹೆಸರುಗಳನ್ನು ತಿಳಿಸುವ ಪದಗಳಿಗೆ **ನಾಮಪದ (संज्ञा)** ಎಂದು ಹೆಸರು.

ಮೇಲೆ 3 ಸಾಲು ಪದಗಳಿವೆ.

1ನೆಯಸಾಲಿನ ಪದಗಳು ಹಿಂದಿನಿಂದಲೂ ರೂಢಿಯಾಗಿ ಕರೆಯುತ್ತಾ ಬಂದಿರುವ ವಸ್ತುಗಳು ಇಲ್ಲವೆ ಪದಾರ್ಥಗಳ ಜಾತಿಗಳ ಹೆಸರುಗಳನ್ನು ತಿಳಿಸುತ್ತವೆ. ವ್ಯಾಕರಣದಲ್ಲಿ ಇಂತಹ ಪದಗಳು **ರೂಢನಾಮಗಳು (जातिवाचक संज्ञा)** ಎಂದು ಕರೆಯಲ್ಪಡುತ್ತವೆ.

2ನೆಯ ಸಾಲಿನ ಪದಗಳು ಯಾವನಾದರೂ ಒಬ್ಬ ನಿರ್ದಿಷ್ಟ ವ್ಯಕ್ತಿಯನ್ನೋ, ಪ್ರದೇಶವನ್ನೋ ಗುರುತಿಸುವುದಕ್ಕಾಗಿ ಅವರವರ

ಇಷ್ಟಾನುಸಾರ ಇಟ್ಟುಕೊಂಡಿರುವ ಹೆಸರುಗಳನ್ನು ತಿಳಿಸುತ್ತವೆ. ಅಂತಹ ಪದಗಳು ಅಂಕಿತ ನಾಮಗಳು (व्यक्तिवाचक संज्ञा) ಎಂದು ಕರೆಯಲ್ಪಡುತ್ತವೆ.

3ನೆಯ ಸಾಲಿನ ಪದಗಳು ಯಾವನಾದರೂ ಗೊತ್ತಾದ ವ್ಯಕ್ತಿ ಇಲ್ಲವೇ ಕಣ್ಣಿಗೆ ಕಾಣುವ ಪದಾರ್ಥಗಳ ಹೆಸರುಗಳನ್ನು ತಿಳಿಸದೆ ಆಯಾ ವ್ಯಕ್ತಿ ಮತ್ತು ಪದಾರ್ಥಗಳಲ್ಲಿರುವ ಭಾವ ಅಥವಾ ಧರ್ಮವನ್ನು ತಿಳಿಸುತ್ತವೆ. ಆದಕಾರಣ ಅಂತಹ ಪದಗಳು ಭಾವನಾಮಗಳು (भावनाम).

संज्ञा ನಾಮಪದ




## ಅಭ್ಯಾಸ

ಕೆಳಗೆ ಬರೆದಿರುವ ರೂಢನಾಮಗಳ (जातिवाचक संज्ञा) ಎದುರು ಸ್ಥಳಗಳಲ್ಲಿ ಅವುಗಳ ಜಾತಿಗಳ ಅಂಕಿತನಾಮ (व्यक्तिवाचक) ಗಳನ್ನು ಬರೆಯಿರಿ. ಹೇಗೆಂದರೆ :—लड़का—मोहन, लड़की — ललिता ಇತ್ಯಾದಿ.

| जातिवाचक | व्यक्तिवाचक | जातिवाचक | व्यक्तिवाचक |
|---|---|---|---|
| लड़का | ——— | पहाड़ | ——— |
| लड़की | ——— | भाषा | ——— |
| नगर | ——— | सागर | ——— |
| देश | ——— | पुस्तक | ——— |
| नदी | ——— | राजा | ——— |

# लिंग ನಾಮಪದಗಳ ಲಿಂಗ

ನಾಮಪದಗಳಿಗೆ ಲಿಂಗ, ವಚನ, ವಿಭಕ್ತಿ ಎಂಬ 3 ಲಕ್ಷಣಗಳುಂಟು.

## ಪ್ರಾಣಿವಾಚಕ ನಾಮಪದ ಶಬ್ದಗಳು

| *A* ಪುಲ್ಲಿಂಗ | *B* ಸ್ತ್ರೀಲಿಂಗ |
|---|---|
| **लड़का** खेलता है। <br> ಹುಡುಗನು ಆಡುತ್ತಾನೆ. | **लड़की** खेलती है। <br> ಹುಡುಗಿಯು ಆಡುತ್ತಾಳೆ. |
| **आदमी** आता है। <br> ಮನುಷ್ಯನು ಬರುತ್ತಾನೆ. | **औरत** आती है। <br> ಹೆಂಗಸು ಬರುತ್ತಾಳೆ. |
| **धोबी** धो रहा है। <br> ಅಗಸನು ಒಗೆಯುತ್ತಾ ಇದ್ದಾನೆ. | **धोबिन** धो रही है। <br> ಅಗಸಗಿತ್ತಿಯು ಒಗೆಯುತ್ತಿದ್ದಾಳೆ. |
| **पिताजी** लिख रहे हैं। <br> ತಂದೆಯವರು ಬರೆಯುತ್ತಾ ಇದ್ದಾರೆ. | **माताजी** लिख रही हैं। <br> ತಾಯಿಯವರು ಬರೆಯುತ್ತಾ ಇದ್ದಾರೆ. |
| **भाई** आया। <br> ಸಹೋದರನು ಬಂದನು. | **बहिन** आयी। <br> ಸಹೋದರಿಯು ಬಂದಳು. |
| **अध्यापक** आये। <br> ಅಧ್ಯಾಪಕರು ಬಂದರು. | **अध्यापिका** आयीं। <br> ಅಧ್ಯಾಪಿಕೆಯವರು ಬಂದರು., |
| **बैल** जोतता है। <br> ಎತ್ತು ಉಳುತ್ತದೆ. | **गाय** जोतती है। <br> ಹಸು ಉಳುತ್ತದೆ. |
| **घोड़ा** दौड़ेगा। <br> ಗಂಡು ಕುದುರೆಯು ಓಡುವುದು. | **घोड़ी** दौड़ेगी ! <br> ಹೆಣ್ಣು ಕುದುರೆಯು ಓಡುವುದು. |
| **कुत्ता** आयेगा। <br> ಗಂಡು ನಾಯಿಯು ಬರುವುದು. | **कुत्ती** आयेगी। <br> ಹೆಣ್ಣು ನಾಯಿಯು ಬರುವುದು. |
| **मोर** दौड़ेगा। <br> ಗಂಡು ನವಿಲು ಓಡುವುದು. | **मोरनी** नाचेगी। <br> ಹೆಣ್ಣು ನವಿಲು ಕುಣಿಯುವುದು. |

ನಾಮಪದ ಶಬ್ದಗಳ ಯಾವ ರೂಪಗಳಿಂದ ಪುರುಷಜಾತಿ ಅಥವಾ ಸ್ತ್ರೀ ಜಾತಿಯ ಜ್ಞಾನವು ಉಂಟಾಗುವುದೋ ಅಂತಹ ರೂಪಕ್ಕೆ ಲಿಂಗ ಎಂದು ಹೆಸರು.

ಹಿಂದೀ ಭಾಷೆಯಲ್ಲಿ ನಾಮಪದ ಶಬ್ದಗಳು ಪುಲ್ಲಿಂಗ, ಸ್ತ್ರೀಲಿಂಗ ಎಂದು 2 ಜಾತಿಗಳಲ್ಲಿ ವಿಭಾಗವಾಗಿವೆ. ನಪುಂಸಕಲಿಂಗ ಬಳಕೆಯಲ್ಲಿಲ್ಲ.

ಮೇಲಿನ *A* ಗುಂಪಿನಲ್ಲಿ ದಪ್ಪಕ್ಷರದಲ್ಲಿರುವ ನಾಮಪದಗಳ ಶಬ್ದಗಳು ಗಂಡಸರ ಮತ್ತು ಗಂಡುಪ್ರಾಣಿಗಳ ಹೆಸರುಗಳನ್ನು ತಿಳಿಸುತ್ತವೆ. ವ್ಯಾಕರಣ ದಲ್ಲಿ ಇಂತಹ ಶಬ್ದಗಳು **ಪುಲ್ಲಿಂಗ ಶಬ್ದ**ಗಳೆಂದು ಕರೆಯಲ್ಪಡುತ್ತವೆ.

ಮೇಲಿನ *B* ಗುಂಪಿನಲ್ಲಿ ದಪ್ಪಕ್ಷರದಲ್ಲಿರುವ ನಾಮಪದ ಶಬ್ದಗಳು ಹೆಂಗಸರ ಮತ್ತು ಹೆಣ್ಣುಪ್ರಾಣಿಗಳ ಹೆಸರುಗಳನ್ನು ತಿಳಿಸುತ್ತವೆ. ಇಂತಹ ಶಬ್ದಗಳು ಸ್ತ್ರೀಲಿಂಗ ಶಬ್ದಗಳು.

ಈ ರೀತಿಯಾಗಿ ಪ್ರಾಣಿವಾಚಕ ನಾಮಪದ ಶಬ್ದಗಳ ಲಿಂಗಗಳನ್ನು ತಿಳಿದುಕೊಳ್ಳುವುದು ಸುಲಭ.

## ಅಪ್ರಾಣಿವಾಚಕ ನಾಮಪದ ಶಬ್ದಗಳು

| *A* ಪುಲ್ಲಿಂಗ | *B* ಸ್ತ್ರೀಲಿಂಗ |
|---|---|
| मैदान में **पेड** रहता है।<br>ಮೈದಾನದಲ್ಲಿ ಮರವಿದೆ. | अलमारी में **किताब** रहती है।<br>ಬೀರುವಿನಲ್ಲಿ ಪುಸ್ತಕವಿದೆ. |
| पेड पर **फल** लगता है।<br>ಮರದ ಮೇಲೆ ಹಣ್ಣು ಬಿಡುತ್ತದೆ. | वहाँ **साइकिल** रहती है।<br>ಅಲ್ಲಿ ಸೈಕಲ್ ಇರುತ್ತದೆ. |
| **दरवाजा** खुलता है।<br>ಬಾಗಿಲು ತೆರೆಯುತ್ತದೆ. | पेटी में **डिबिया** रहती है।<br>ಪೆಟ್ಟಿಗೆಯಲ್ಲಿ ಡಬ್ಬವಿದೆ. |
| **कमरा** बंद हुआ।<br>ಕೊಠಡಿಯು ಮುಚ್ಚಿತು. | **पाठशाला** बंद हुई।<br>ಶಾಲೆಯು ಮುಚ್ಚಿತು. |

| *A* ಪುಲ್ಲಿಂಗ | *B* ಸ್ತ್ರೀಲಿಂಗ |
|---|---|
| आज **पानी** बरसता है। | **घंटी** बजती है। |
| ಈ ದಿನ ಮಳೆಯು ಸುರಿಸುತ್ತದೆ. | ಗಂಟೆಯು ಹೊಡೆಯುತ್ತದೆ. |
| **दूध** से **दही** बनता है। | **मेज** पर **छतरी** रहती है। |
| ಹಾಲಿನಿಂದ ಮೊಸರು ಆಗುತ್ತದೆ. | ಮೇಜುವಿನ ಮೇಲೆ ಛತ್ರಿ ಇದೆ. |

ಮೇಲಿನ ವಾಕ್ಯಗಳಲ್ಲಿ *A* ಮತ್ತು *B* ಸಾಲುಗಳಲ್ಲಿನ ದಪ್ಪಕ್ಷರದಲ್ಲಿರುವ ಪದಗಳೆಲ್ಲವೂ ಅಪ್ರಾಣಿವಾಚಕ ನಾಮಪದ ಶಬ್ದಗಳು. ಕನ್ನಡದ ವ್ಯಾಕರಣದಲ್ಲಿ ಇವುಗಳೆಲ್ಲವೂ ನಪುಂಸಕ ಲಿಂಗ ಜಾತಿಗೆ ಸೇರಿದ ಶಬ್ದಗಳು. ಅದರೆ ಹಿಂದಿ ಭಾಷೆಯ ವ್ಯಾಕರಣದಲ್ಲಿ ನಪುಂಸಕ ಲಿಂಗ ಜಾತಿಯು ಇಲ್ಲದಿರುವ ಕಾರಣ ಮೇಲಿನ *A* ಸಾಲಿನ ಅಪ್ರಾಣಿವಾಚಕ ಶಬ್ದಗಳು ಪುಲ್ಲಿಂಗ ಜಾತಿಗೆ ಸೇರಿದವುಗಳಾಗಿಯೂ *B* ಸಾಲಿನ ಅಪ್ರಾಣಿವಾಚಕ ಶಬ್ದಗಳು ಸ್ತ್ರೀಲಿಂಗ ಜಾತಿಗೆ ಸೇರಿದವುಗಳಾಗಿಯೂ ಆಗಿವೆ.

ಈ ಮೇಲಿನ ಮಾತುಗಳನ್ನೇ ಈ ಕೆಳಗಿನ ಪಟ್ಟಿಯಲ್ಲಿ ವಿವರವಾಗಿ ಬರೆದಿದೆ.



Funding: Tattva Heritage Foundation,Kolkata. Digitization: eGangotri.

# ಲಿಂಗ ನಿರ್ಣಯ

## (ಅಪ್ರಾಣಿವಾಚಕ ಶಬ್ದಗಳು ಮಾತ್ರ)

ಅಪ್ರಾಣಿವಾಚಕ ನಾಮಪದ ಶಬ್ದಗಳ (ಕನ್ನಡದಲ್ಲಿನ ನಪುಂಸಕ ಲಿಂಗ ಶಬ್ದಗಳು) ಲಿಂಗ ನಿರ್ಣಯವು ಕಷ್ಟಸಾಧ್ಯ. ಆದಕಾರಣ ಅಂತಹ ಅಪ್ರಾಣಿವಾಚಕ ಶಬ್ದಗಳ ಲಿಂಗನಿರ್ಣಯಕ್ಕಾಗಿ ಕೆಲವು ಸ್ಥೂಲ ನಿಯಮಗಳನ್ನು ಈ ಕೆಳಗೆ ಕೊಟ್ಟಿದೆ.

| 1 | 2 |
|---|---|
| भारत बडा देश है। | गंगा बडी नदी है। |
| ಭಾರತವು ದೊಡ್ಡ ದೇಶ. | ಗಂಗಾ ನದಿಯು ದೊಡ್ಡ ನದಿ. |
| यहाँ ठंडा पानी है। | वहाँ ठंडी काफी है। |
| ಇಲ್ಲಿ ತಣ್ಣೀರು ಇದೆ. | ಅಲ್ಲಿ ತಣ್ಣನೆಯ ಕಾಫಿ ಇದೆ. |
| यह सीता का कमरा है। | वह राम की किताब है। |
| ಇದು ಸೀತೆಯ ಕೊಠಡಿ. | ಅದು ರಾಮನ ಪುಸ್ತಕ. |
| मेज पर उसका कपडा है। | बेंच पर उसकी कलम है। |
| ಮೇಜುವಿನ ಮೇಲೆ ಅವನ ಬಟ್ಟೆ ಇದೆ. | ಬೆಂಚಿನಮೇಲೆ ಅವನ ಲೇಖಣಿ ಇದೆ. |
| क्या यह तुम्हारा घर है? | क्या वह तुम्हारी पुस्तक है? |
| ಇದು ನಿಮ್ಮ ಮನೆಯೋ? | ಅದು ನಿಮ್ಮ ಪುಸ್ತಕವೋ? |
| मैदान में एक पेड रहता है। | संदूक में पुस्तक रहती है। |
| ಮೈದಾನದಲ್ಲಿ ಒಂದು ಮರವಿದೆ. | ಪೆಟ್ಟಿಗೆಯಲ್ಲಿ ಪುಸ್ತಕವಿದೆ. |
| पूरब में सूरज निकला। | गाडी स्टेशन में ठहरी। |
| ಪೂರ್ವದಲ್ಲಿ ಸೂರ್ಯನು ಹುಟ್ಟಿದನು. | ಗಾಡಿಯು ಸ್ಟೇಷನ್ನಿನಲ್ಲಿ ನಿಂತಿತು. |
| आज हवाई-जहाज यहाँ आयेगा। | साइकिल कल यहाँ आयेगी। |
| ಈದಿನ ವಿಮಾನವು ಇಲ್ಲಿ ಬರುವುದು. | ಸೈಕಲ್ಲು ನಾಳೆ ಇಲ್ಲಿ ಬರುವುದು. |

ಮೇಲಿನ 1 ಮತ್ತು 2ನೆಯ ಗುಂಪುಗಳಲ್ಲಿ ದಪ್ಪಕ್ಷರದಲ್ಲಿರುವ ಶಬ್ದಗಳಿಂದ ಅಪ್ರಾಣಿವಾಚಕ ನಾಮಪದಗಳ ಲಿಂಗಗಳನ್ನು ಸುಲಭವಾಗಿ ನಿರ್ಣಯಿಸಬಹುದು.

ಎರಡೂ ಗುಂಪಿನ ಮೊದಲನೇ 2 ವಾಕ್ಯಗಳಲ್ಲಿರುವ ದಪ್ಪ ಅಕ್ಷರದಲ್ಲಿರುವ ವಿಶೇಷಣಗಳೂ, ಮುಂದಿನ 3 ವಾಕ್ಯಗಳಲ್ಲಿನ ದಪ್ಪಕ್ಷರದಲ್ಲಿ ಇರುವ ಷಷ್ಠಿವಿಭಕ್ತಿ ಪ್ರತ್ಯಯಗಳಾದ का, की ಪ್ರತ್ಯಯಗಳೂ ಮತ್ತು ಉಳಿದ 3 ವಾಕ್ಯಗಳಲ್ಲಿರುವ ದಪ್ಪಕ್ಷರದಲ್ಲಿರುವ ಕ್ರಿಯಾರೂಪಗಳೂ ಆಯಾ ವಾಕ್ಯಗಳಲ್ಲಿರುವ ಅಪ್ರಾಣಿವಾಚಕ ನಾಮಪದಗಳ ಲಿಂಗಗಳನ್ನು ನಿರ್ಣಯಿಸಲು ಸಹಾಯಕವಾಗುತ್ತವೆ. (ಅಧ್ಯಾಪಕರುಗಳು ಈ ವಿಷಯವಾಗಿ ಇನ್ನೂ ವಿವರಣೆ ನೀಡಬಹುದು.)

ಈ ಕೆಳಗೆ ಬರೆದಿರುವ ಇನ್ನೂ ಕೆಲವು ಸ್ಥೂಲ ನಿಯಮಗಳು ಅಪ್ರಾಣಿವಾಚಕ ಶಬ್ದಗಳ ಲಿಂಗ ನಿರ್ಣಯದ ವಿಷಯದಲ್ಲಿ ವಿದ್ಯಾರ್ಥಿಗಳ ತಿಳಿವಳಿಕೆಗೆ ಸಹಕಾರಿಯಾಗಬಲ್ಲವು.

## ಪುಲ್ಲಿಂಗ ಶಬ್ದಗಳು

1) अ ಕಾರಾಂತ आ ಕಾರಾಂತ ಅಪ್ರಾಣಿವಾಚಕ ಹಿಂದೀ ಶಬ್ದಗಳು ಸಾಮಾನ್ಯವಾಗಿ ಪುಲ್ಲಿಂಗ ಶಬ್ದಗಳಾಗಿವೆ.

ಉದಾ :—देश, पेड, फूल, फल, कपडा, रुपया, टुकडा, लोटा, अंडा ಇತ್ಯಾದಿ.

ಅಪವಾದಗಳು :—ईंट, बात, याद, राह, दवा, हवा, सजा ಇತ್ಯಾದಿ.

2) ಕಡೆಯಲ್ಲಿ आव, आवा, त्व, पन, पा ಇತ್ಯಾದಿ ಭಾವವಾಚಕ ನಾಮಪದಗಳು ಪುಲ್ಲಿಂಗ ಶಬ್ದಗಳಾಗಿವೆ.

ಉದಾ :—चढाव, मनुष्यत्व, बचपन, बुढापा, चढावा ಇತ್ಯಾದಿ.

3) ಪರ್ವತಗಳ ಹೆಸರುಗಳು ಪುಲ್ಲಿಂಗದಲ್ಲಿರುತ್ತವೆ.

ಉದಾ :—हिमालय, विंध्याचल, चामुंडी ಇತ್ಯಾದಿ.

4) ವಾರಗಳ ಹೆಸರುಗಳು, ಮಾಸಗಳ ಹೆಸರುಗಳು, ಗ್ರಹ ಮತ್ತು ನಕ್ಷತ್ರಗಳ ಹೆಸರುಗಳು ಪುಲ್ಲಿಂಗದಲ್ಲಿರುತ್ತವೆ.

ಉದಾ : —शनीचर, इतवार, चैत, सावन, सूर्य ಇತ್ಯಾದಿ.

## ಸ್ತ್ರೀಲಿಂಗ ಶಬ್ದಗಳು

1) ई ಕಾರಾಂತ ಅಪ್ರಾಣಿವಾಚಕ ನಾಮಪದಗಳು ಸಾಧಾರಣವಾಗಿ ಸ್ತ್ರೀಲಿಂಗವಾಗಿರುತ್ತವೆ.

ಉದಾ :—टोपी, रोटी, नदी, छतरी, कुरसी ಇತ್ಯಾದಿ.

ಅಪವಾದಗಳು:—पानी, मोती, दही, जी, घी ಇತ್ಯಾದಿ.

2) आ ಕಾರಾಂತ ಸಂಸ್ಕೃತ ಶಬ್ದಗಳು ಸ್ತ್ರೀಲಿಂಗವಾಗಿರುತ್ತವೆ.

ಉದಾ :—माला, आशा, कृपा, सभा, परीक्षा ಇತ್ಯಾದಿ.

3) इ ಕಾರಾಂತ ಸಂಸ್ಕೃತ ಶಬ್ದಗಳು ಸ್ತ್ರೀಲಿಂಗವಾಗಿರುತ್ತವೆ.

ಉದಾ :—रुचि, हानि, भक्ति, नीति, रीति, जाति ಇತ್ಯಾದಿ.

4) इया ತುದಿಯಲ್ಲಿ ಉಳ್ಳ ಮತ್ತು ಕಿರಿಯುವನ್ನು ಸೂಚಿಸುವ ಲಘುವಾಚಕ ಶಬ್ದಗಳು ಸ್ತ್ರೀಲಿಂಗವಾಗಿರುತ್ತವೆ.

ಉದಾ :—चिड़िया, डिबिया गुड़िया ಇತ್ಯಾದಿ.

5) ಕಡೆಯಲ್ಲಿ आई, त, ता, इश, वट ಮತ್ತು हट ವುಳ್ಳ ಭಾವವಾಚಕ ನಾಮಪದಗಳು ಸ್ತ್ರೀಲಿಂಗದಲ್ಲಿರುತ್ತವೆ.

ಉದಾ :—लंबाई, बचत, पशुता, गुंजाइश, दिखावट ಇತ್ಯಾದಿ.

6) ನದಿಗಳ ಮತ್ತು ಭಾಷೆಗಳ ಹೆಸರುಗಳು ಸ್ತ್ರೀಲಿಂಗದಲ್ಲಿರುತ್ತವೆ.

ಉದಾ :—गंगा, कावेरी, हिन्दी, कन्नड ಇತ್ಯಾದಿ.

## ಲಿಂಗ ಪರಿವರ್ತನೆ

(ಪ್ರಾಣಿವಾಚಕ ಶಬ್ದಗಳು ಮಾತ್ರ)

### आ ಪ್ರತ್ಯಯ

| ಪುಲ್ಲಿಂಗ | ಸ್ತ್ರೀಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| आचार्य | आचार्या | प्रिय | प्रिया |
| ಆಚಾರ್ಯ | ಆಚಾರ್ಯಳು | ಪ್ರೀತಿಪಾತ್ರ | ಪ್ರೀತಿಪಾತ್ರಳು |
| छात्र | छात्रा | बालक | बालिका |
| ವಿದ್ಯಾರ್ಥಿ | ವಿದ್ಯಾರ್ಥಿನಿ | ಬಾಲಕ | ಬಾಲಕಿ |

| ಪುಲ್ಲಿಂಗ | ಸ್ತ್ರೀಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| बाल | बाला | अध्यक्ष | अध्यक्षा |
| ಬಾಲ | ಬಾಲೆ | ಅಧ್ಯಕ್ಷ | ಅಧ್ಯಕ್ಷಳು |
| सदस्य | सदस्या | नायक | नायिका |
| ಸದಸ್ಯ | ಸದಸ್ಯಳು | ನಾಯಕ | ನಾಯಕಿ |
| सुत | सुता | साहेब | साहेबा |
| ಮಗ | ಮಗಳು | ಸಾಹೇಬ | ಸಾಹೇಬಳು |

## ई ಪ್ರತ್ಯಯ

| ಪುಲ್ಲಿಂಗ | ಸ್ತ್ರೀಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| लडका | लडकी | घोडा | घोडी |
| ಹುಡುಗ | ಹುಡುಗಿ | ಗಂಡುಕುದುರೆ | ಹೆಣ್ಣು ಕುದುರೆ |
| देव | देवी | बेटा | बेटी |
| ದೇವ | ದೇವಿ | ಮಗ | ಮಗಳು |
| बंदर | बंदरी | चाचा | चाची |
| ಗಂಡುಕಪಿ | ಹೆಣ್ಣು ಕಪಿ | ಚಿಕ್ಕಪ್ಪ | ಚಿಕ್ಕಮ್ಮ |
| मेंढक | मेंढकी | गधा | गधी |
| ಗಂಡುಕಪ್ಪೆ | ಹೆಣ್ಣು ಕಪ್ಪೆ | ಗಂಡುಕತ್ತೆ | ಹೆಣ್ಣು ಕತ್ತೆ |
| पुत्र | पुत्री | कुत्ता | कुत्ती |
| ಮಗ | ಮಗಳು | ಗಂಡುನಾಯಿ | ಹೆಣ್ಣುನಾಯಿ |

## इन ಪ್ರತ್ಯಯ

| ಪುಲ್ಲಿಂಗ | ಸ್ತ್ರೀಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| धोबी | धोबिन | तेली | तेलिन |
| ಅಗಸ | ಅಗಸಗಿತ್ತಿ | ಎಣ್ಣೆಯವನು | ಎಣ್ಣೆಯವಳು |
| नाई | नाइन | माली | मालिन |
| ನಾಯಿಂದ | ನಾಯಿಂದಳು | ತೋಟಗಾರ | ತೋಟಗಾರಳು |

| ಪುಲ್ಲಿಂಗ | ಸ್ತ್ರೀಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| जुलाहा<br>ನೆಯ್ಗೆಯವನು | जुलाहिन<br>ನೆಯ್ಗೆಯವಳು | बाघ<br>ಗಂಡುಹುಲಿ | बाघिन<br>ಹೆಣ್ಣುಹುಲಿ |
| पंडित<br>ಪಂಡಿತ | पंडिताइन<br>ಪಂಡಿತಳು | बनिया<br>ವ್ಯಾಪಾರಿ | बनियाइन<br>ಹೆಂಗಸುವ್ಯಾಪಾರಿ |

## नी ಮತ್ತು आनी ಪ್ರತ್ಯಯ

| ಪುಲ್ಲಿಂಗ | ಸ್ತ್ರೀಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| शेर<br>ಗಂಡುಸಿಂಹ | शेरनी<br>ಹೆಣ್ಣುಸಿಂಹ | सेठ<br>ಸೇಠಿ | सेठानी<br>ಸೇಠಿಯಹೆಂಗಸು |
| मोर<br>ಗಂಡುನವಿಲು | मोरनी<br>ಹೆಣ್ಣುನವಿಲು | सियार<br>ಗಂಡುನರಿ | सियारानी<br>ಹೆಣ್ಣುನರಿ |

ಮೇಲಿನ ಶಬ್ದಗಳಲ್ಲಿ ನೋಡಿರುವಂತೆ ಪ್ರಾಣಿವಾಚಕ ಪುಲ್ಲಿಂಗ ನಾಮಪದ ಶಬ್ದಗಳ ಅಂತ್ಯದಲ್ಲಿ आ, ई, इन, नी ಮತ್ತು आनी ಮೊದಲಾದ ಸ್ತ್ರೀವಾಚಕ ಪ್ರತ್ಯಯಗಳನ್ನು ಸೇರಿಸುವುದರಿಂದ ಸ್ತ್ರೀಲಿಂಗ ಶಬ್ದಗಳಾಗುತ್ತವೆ.

| ಪುಲ್ಲಿಂಗ | ಸ್ತ್ರೀಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| बैल<br>ಎತ್ತು | गाय<br>ಹಸು | राजा<br>ರಾಜ | रानी<br>ರಾಣಿ |
| वर<br>ಗಂಡು | वधू<br>ಹೆಣ್ಣು | पति<br>ಪತಿ | पत्नी<br>ಹೆಂಡತಿ |
| बाप<br>ತಂದೆ | माँ<br>ತಾಯಿ | भाई<br>ಸಹೋದರ | बहन<br>ಸಹೋದರಿ |
| पुरुष<br>ಪುರುಷ | स्त्री<br>ಸ್ತ್ರೀ | पिता<br>ತಂದೆ | माता<br>ತಾಯಿ |
| आदमी<br>ಮನುಷ್ಯ | औरत<br>ಹೆಂಗಸು | नर<br>ಗಂಡು | मादा<br>ಹೆಣ್ಣು |

ಮೇಲೆ ಕೆಲವು ಪ್ರಾಣಿವಾಚಕ ಪುಲ್ಲಿಂಗ ನಾಮಪದಗಳು ಸ್ತ್ರೀವಾಚಕ ಪ್ರತ್ಯಯಗಳು ಸೇರದೆ ಬೇರೆ ಬೇರೆ ಪದಗಳೇ ಆಗಿ ಸ್ತ್ರೀಲಿಂಗಗಳಾಗುತ್ತವೆ.

# वचन ನಾಮಪದಗಳ ವಚನ

| ಏಕವಚನ<br>1 | ಬಹುವಚನ<br>2 |
|---|---|
| लड़का लिखता है।<br>ಹುಡುಗನು ಬರೆಯುತ್ತಾನೆ. | लड़के लिखते हैं।<br>ಹುಡುಗರು ಬರೆಯುತ್ತಾರೆ. |
| लड़की खेलती है।<br>ಹುಡುಗಿಯು ಆಡುತ್ತಾಳೆ. | लड़कियाँ खेलती हैं।<br>ಹುಡುಗಿಯರು ಆಡುತ್ತಾರೆ. |
| इस मेज पर एक किताब है।<br>ಈ ಮೇಜುವಿನಮೇಲೆ 1 ಪುಸ್ತಕವಿದೆ. | उस मेज पर चार किताबें हैं।<br>ಆ ಮೇಜಿನ ಮೇಲೆ 4 ಪುಸ್ತಕಗಳಿವೆ. |
| यहाँ एक मेज है।<br>ಇಲ್ಲಿ ಒಂದು ಮೇಜುವಿದೆ. | वहाँ तीन मेजें हैं।<br>ಅಲ್ಲಿ 3 ಮೇಜುಗಳಿವೆ. |
| इस टोकरी में एफ फल है।<br>ಈ ಮುಕ್ಕರಿಯಲ್ಲಿ ಒಂದು ಹಣ್ಣಿದೆ. | उस टोकरी में चार फल हैं।<br>ಆ ಮುಕ್ಕರಿಯಲ್ಲಿ 4 ಹಣ್ಣುಗಳಿವೆ. |
| बेंच पर एक गिलास है।<br>ಬೆಂಚಿನ ಮೇಲೆ ಒಂದು ಲೋಟವಿದೆ. | बेंच पर दो गिलास हैं।<br>ಬೆಂಚಿನ ಮೇಲೆ 2 ಲೋಟಗಳಿವೆ. |
| गाँव में एक पाठशाला है।<br>ಹಳ್ಳಿಯಲ್ಲಿ ಒಂದು ಪಾಠಶಾಲೆ ಇದೆ. | शहर में कई पाठशालाएँ हैं।<br>ಪಟ್ಟಣದಲ್ಲಿಅನೇಕ ಪಾಠಶಾಲೆಗಳಿವೆ |
| इस पेड पर एक चिडिया है।<br>ಈ ಮರದ ಮೇಲೆ ಒಂದು ಹಕ್ಕಿ ಇದೆ. | उस पेड पर कई चिडियाँ हैं।<br>ಆ ಮರದಮೇಲೆ ಅನೇಕ ಹಕ್ಕಿಗಳಿವೆ |
| यहाँ एक आदमी है।<br>ಇಲ್ಲಿ ಒಬ್ಬ ಮನುಷ್ಯನಿದ್ದಾನೆ. | वहाँ दो आदमी हैं।<br>ಅಲ್ಲಿ ಇಬ್ಬರು ಮನುಷ್ಯರಿದ್ದಾರೆ. |
| इस कमरे में एक कुरसी है।<br>ಈ ಕೊಠಡಿಯಲ್ಲಿ ಒಂದು ಕುರ್ಚಿ ಇದೆ. | उस कमरे में तीन कुरसियाँ हैं।<br>ಆ ಕೊಠಡಿಯಲ್ಲಿ 3 ಕುರ್ಚಿಗಳಿವೆ. |

ಒಂದು ನಾಮಪದದ ರೂಪವು ಒಂದೇ ಒಂದು ಪ್ರಾಣಿಯ ಅಥವಾ ಒಂದೇ ಒಂದು ವಸ್ತುವಿನ ಹೆಸರನ್ನು ಸೂಚಿಸಬಹುದು. ಇಲ್ಲವೇ ಒಂದಕ್ಕಿಂತ ಹೆಚ್ಚಾದ ವಸ್ತುಗಳ ಹೆಸರುಗಳನ್ನು ಸೂಚಿಸಬಹುದು. ಈ ರೀತಿ ನಾಮಪದ ಶಬ್ದಗಳ ಯಾವ ರೂಪಗಳಿಂದ ಆಯಾ ವಸ್ತುಗಳ ಇಲ್ಲವೇ ಪ್ರಾಣಿಗಳ ಸಂಖ್ಯೆಗಳನ್ನು ತಿಳಿದುಕೊಳ್ಳಲು ಸಾಧ್ಯವೋ ಅಂತಹ ರೂಪಗಳಿಗೆ ವಚನ ಎಂದು ಹೆಸರು.

ಹಿಂದೀ ಭಾಷೆಯಲ್ಲಿ 2 ವಚನಗಳಿವೆ: 1 ಏಕವಚನ. 2 ಬಹುವಚನ.

ಮೇಲಿನ ಪಟ್ಟಿಯಲ್ಲಿ 1ನೇ ಗುಂಪಿನ ಪಟ್ಟಿಯಲ್ಲಿ ದಪ್ಪಕ್ಷರದಲ್ಲಿರುವ ನಾಮಪದದ ರೂಪಗಳಲ್ಲಿ ಪ್ರತಿಯೊಂದೂ ಒಂದೇ ವಸ್ತುವಿನ ಇಲ್ಲವೇ ಮನುಷ್ಯನ ಹೆಸರನ್ನು ತಿಳಿಸುತ್ತವೆ. ಆದ ಕಾರಣ ಅವು ಏಕವಚನ ಪದಗಳು. 2ನೇ ಗುಂಪಿನ ಪಟ್ಟಿಯಲ್ಲಿ ದಪ್ಪಕ್ಷರದಲ್ಲಿರುವ ಪ್ರತಿಯೊಂದು ಶಬ್ದವೂ ಒಂದಕ್ಕಿಂತ ಹೆಚ್ಚಾದ ವಸ್ತುಗಳ ಇಲ್ಲವೇ ಮನುಷ್ಯರ ಹೆಸರುಗಳನ್ನು ತಿಳಿಸುತ್ತವೆ. ಆದಕಾರಣ ಅವು ಬಹುವಚನ ಪದಗಳು.

## ವಚನ ಬದಲಾವಣೆ

### ಪುಲ್ಲಿಂಗ ನಾಮಪದ ಶಬ್ದಗಳು

| ಏಕವಚನ | ಬಹುವಚನ | ಏಕವಚನ | ಬಹುವಚನ |
|---|---|---|---|
| लड़का | लड़के | झंडा | झंडे |
| कपड़ा | कपड़े | बछड़ा | बछड़े |
| रुपया | रुपये | अंडा | अंडे |
| कमरा | कमरे | महीना | महीने |

ಮೇಲಿನ ಪಟ್ಟಿಯಲ್ಲಿ ತಿಳಿಸಿರುವಂತೆ आ ಕಾರಾಂತ ಪುಲ್ಲಿಂಗ ನಾಮಪದ ಶಬ್ದಗಳು ಬಹುವಚನದಲ್ಲಿ ए ಕಾರವನ್ನು ಹೊಂದುತ್ತವೆ.

| | | | |
|---|---|---|---|
| घर | घर | कवि | कवि |
| फल | फल | मुनि | मुनि |
| फूल | फूल | आदमी | आदमी |
| पेड | पेड | भाई | भाई |

ಮೇಲಿನ ಪಟ್ಟಿಯಲ್ಲಿ ತಿಳಿಸಿರುವಂತೆ अ ಕಾರಾಂತ, इ ಕಾರಾಂತ, ई ಕಾರಾಂತ ಪುಲ್ಲಿಂಗ ಏಕವಚನ ಶಬ್ದಗಳು ಏಕವಚನ, ಬಹುವಚನ ಗಳೆರಡರಲ್ಲಿಯೂ ಒಂದೇ ರೂಪದಲ್ಲಿರುತ್ತವೆ.

### ಸ್ತ್ರೀಲಿಂಗ ನಾಮಪದ ಶಬ್ದಗಳು

| ಏಕವಚನ | ಬಹುವಚನ | ಏಕವಚನ | ಬಹುವಚನ |
|---|---|---|---|
| किताब | किताबें | पाठशाला | पाठशालाएँ |
| मेज | मेजें | सेवा | सेवाएँ |
| पुस्तक | पुस्तकें | ऋतु | ऋतुएँ |
| तस्वीर | तस्वीरें | वस्तु | वस्तुएँ |
| दवात | दवातें | बहू | बहुएँ |
| बेंच | बेंचें | गौ | गौएँ |

ಮೇಲಿನ ಪಟ್ಟಿಯಲ್ಲಿ ನಮೂದಿಸಿರುವಂತೆ अ ಕಾರಾಂತ. आ ಕಾರಾಂತ, उ ಕಾರಾಂತ, ऊ ಕಾರಾಂತ ಮತ್ತು औ ಕಾರಾಂತ ಸ್ತ್ರೀಲಿಂಗ ಏಕವಚನ ಪದಗಳು ಅಂತ್ಯದಲ್ಲಿ एँ ಸೇರಿಕೊಂಡು ಬಹುವಚನಗಳಾಗುತ್ತವೆ.

| | | | |
|---|---|---|---|
| बुढिया | बुढियाँ | गुडिया | गुडियाँ |
| चिडिया | चिडियाँ | डिबिया | डिबियाँ |

या ತುದಿಯಲ್ಲಿ ಉಳ್ಳ ಸ್ತ್ರೀಲಿಂಗ ಏಕವಚನ ನಾಮಪದಗಳು ಬಹುವಚನದಲ್ಲಿ ಅರ್ಧಚಂದ್ರಾಕೃತಿ (ँ) ಬಿಂದುವು ಸೇರಿ ಬಹುವಚನ ಗಳಾಗುತ್ತವೆ.

Funding: Tattva Heritage Foundation,Kolkata. Digitization: eGangotri.

| | | | |
|---|---|---|---|
| जाति | जातियाँ | टोपी | टोपियाँ |
| नीति | नीतियाँ | बेटी | बेटियाँ |

ಇ ಕಾರಾಂತ ಮತ್ತು ಈ ಕಾರಾಂತ ಸ್ತ್ರೀಲಿಂಗ ನಾಮಪದಗಳಿಗೆ याँ ಸೇರಿದರೆ ಬಹುವಚನಗಳಾಗುತ್ತವೆ. ಆಗ ಈ ಕಾರವು ಇ ಕಾರವಾಗುತ್ತದೆ.

## कारक चिह्न ನಾಮಪದಗಳ ವಿಭಕ್ತಿ ಪ್ರತ್ಯಯಗಳು

1. मोहन ने पाठ पढा।
   ಮೋಹನನು ಪಾಠವನ್ನು ಓದಿದನು.

2. तुम राम को बुलाओ।
   ನೀನು ರಾಮನನ್ನು ಕರೆ.

3. हम कलम से लिखते हैं।
   ನಾವು ಲೇಖಣಿಯಿಂದ ಬರೆಯುತ್ತೇವೆ.

4. उस नौकर को एक रुपया दो।
   ಆ ನೌಕರನಿಗೆ ಒಂದು ರೂಪಾಯಿಯನ್ನು ಕೊಡು.

5. मैं भोजन के लिए घर जाऊँगा।
   ನಾನು ಊಟಕ್ಕಾಗಿ ಮನೆಗೆ ಹೋಗುವೆನು.

6. यह पुस्तक गोपाल के वास्ते है।
   ಈ ಪುಸ್ತಕವು ಗೋಪಾಲನಿಗೋಸ್ಕರ ಇದೆ.

7. गंगानदी हिमालय से निकलती है।
   ಗಂಗಾನದಿಯು ಹಿಮಾಲಯದಿಂದ ಹುಟ್ಟುತ್ತದೆ.

8. राम का घर छोटा है।
   ರಾಮನ ಮನೆ ಚಿಕ್ಕದು.

9. गाय **के** बछडे बडे हैं।
ಹಸುವಿನ ಕರುಗಳು ದೊಡ್ಡವು.

10. मोहन **की** पुस्तक सुन्दर है।
ಮೋಹನನ ಪುಸ್ತಕವು ಸುಂದರವಾಗಿದೆ.

11. लडका स्कूल **में** है।
ಹುಡುಗನು ಸ್ಕೂಲಿನಲ್ಲಿದ್ದಾನೆ.

12. मेज **पर** किताबें हैं।
ಮೇಜುವಿನ ಮೇಲೆ ಪುಸ್ತಕಗಳಿವೆ.

13. **हे** भगवान, हमारी रक्षा करो।
ಹೇ ಭಗವಾನ್, ನಮ್ಮ ರಕ್ಷಣೆಯನ್ನು ಮಾಡು.

ಮೇಲಿನ ವಾಕ್ಯಗಳ ನಾಮಪದದ ಜೊತೆ ದಪ್ಪಕ್ಷರದಲ್ಲಿ ಜೋಡಿಸಿರುವ ಪ್ರತ್ಯಯಗಳಿಗೆ ಕಾರಕಚಿಹ್ನೆ ಅಥವಾ ವಿಭಕ್ತಿ ಪ್ರತ್ಯಯಗಳೆಂದು ಕರೆಯುತಾರೆ.

ವಿಭಕ್ತಿ ಪ್ರತ್ಯಯಗಳು ನಾಮಪದಗಳ ಜೊತೆಗೆ ವಾಕ್ಯಗಳಲ್ಲಿನ ಇತರ ಪದಗಳ ಸಂಬಂಧವನ್ನು ಜೋಡಿಸುತ್ತವೆ.

**कर्ता कारक** ಪ್ರಥಮಾ ವಿಭಕ್ತಿ ने ಉ (ಸಕರ್ಮಕ ಕ್ರಿಯಾಪದದ ಭೂತ ಕಾಲದಲ್ಲಿ ಮಾತ್ರ)

**कर्म कारक** ದ್ವಿತೀಯಾ ವಿಭಕ್ತಿ **को** ಅನ್ನು

**करण कारक** ತೃತೀಯಾ ವಿಭಕ್ತಿ **से** ಇಂದ

**संप्रदान कारक** ಚತುರ್ಥೀ ವಿಭಕ್ತಿ **को, के लिये, के वास्ते** ಗೆ, ಕ್ಕೆ, ಗಾಗಿ, ಗೋಸ್ಕರ

**अपादान कारक** ಪಂಚಮೀ ವಿಭಕ್ತಿ **से** ದೆಸೆಯಿಂದ

**संबंध कारक** ಷಷ್ಠೀ ವಿಭಕ್ತಿ **का, के, की** ನ, ಳ, ರ, ಯ

**अधिकरण कारक** ಸಪ್ತಮೀ ವಿಭಕ್ತಿ **में, पर** ಅಲ್ಲಿ, ಮೇಲೆ

**संबोधन कारक** ಸಂಬೋಧನ ವಿಭಕ್ತಿ **हे, ए, ऐ, ओ** ಹೇ, ಓ, ಇತ್ಯಾದಿ.

ಹಿಂದೀ ಭಾಷೆಯಲ್ಲಿ 8 ವಿಭಕ್ತಿ ಪ್ರತ್ಯಯಗಳಿವೆ.

*N.B.* ಪ್ರಥಮಾ ವಿಭಕ್ತಿಯ ने ಪ್ರತ್ಯಯವು ಕ್ರಿಯಾಪದವು ಸಕರ್ಮಕ ಭೂತಕಾಲದಲ್ಲಿದ್ದಾಗ ಮಾತ್ರ ಕರ್ತೃಪದಕ್ಕೆ ಸೇರುತ್ತದೆ. ಉಳಿದ ಕಾಲಗಳಲ್ಲಿ ने ಪ್ರತ್ಯಯವು ಬರುವುದಿಲ್ಲ. ಮತ್ತು ಆಯಾ ಪದಗಳೇ ಪ್ರಥಮಾ ವಿಭಕ್ತಿಯ ಅರ್ಥವನ್ನು ಕೊಡುತ್ತವೆ.

ಸಂಬೋಧನ ವಿಭಕ್ತಿಯ ಬಳಕೆಯು ಅಷ್ಟಾಗಿ ಇರುವುದಿಲ್ಲ.

| | | | |
|---|---|---|---|
| राम का | घर में | हमको | उसको |
| सीता से | पुस्तक को | तुमसें | मुझसें |

ಕನ್ನಡದಂತೆಯೇ ಹಿಂದಿಯಲ್ಲಿಯೂ ವಿಭಕ್ತಿ ಪ್ರತ್ಯಯಗಳನ್ನು ನಾಮಪದಗಳ ಕೊನೆಯಲ್ಲಿ ಬಿಡಿಸಿ ಬರೆಯುತ್ತಾರೆ. ಸರ್ವನಾಮಗಳಿಗೆ ಸೇರುವಾಗ ಅವುಗಳಿಗೆ ಸೇರಿಕೊಂಡೇ ಬರುತ್ತವೆ.

ನಾಮಪದಗಳು ತಮ್ಮ ಏಕವಚನ, ಬಹುವಚನಗಳ ಎರಡು ರೂಪಗಳಲ್ಲಿಯೂ ವಿಭಕ್ತಿ ಪ್ರತ್ಯಯಗಳನ್ನು ಹೊಂದುವಾಗ ಕೆಲವು ವ್ಯತ್ಯಾಸಗಳನ್ನು ಹೊಂದುತ್ತವೆ. ಆ ರೂಪಗಳನ್ನು ಈ ಕೆಳಗೆ ಕೊಡಲಾಗಿದೆ:

| | | | | | | | |
|---|---|---|---|---|---|---|---|
| घर | + को | = | घर को | हाथी | + में | = | हाथी में |
| पुस्तक | + से | = | पुस्तक से | भानु | + ने | = | भानु ने |
| सेवा | + में | = | सेवा में | चिडिया | + से | = | चिडिया से |
| माता | + ने | = | माता ने | हथिनी | + को | = | हथिनी को |
| मुनि | + को | = | मुनि को | कुत्ती | + को | = | कुत्ती को |

ಮೇಲಿನ ಪಟ್ಟಿಯಂತೆ आ ಕಾರಾಂತ ಪುಲ್ಲಿಂಗ ನಾಮಪದಗಳನ್ನು ಬಿಟ್ಟು, ಇತರ ಎಲ್ಲಾ ಪುಲ್ಲಿಂಗ, ಸ್ತ್ರೀಲಿಂಗ ಏಕವಚನ ನಾಮಪದಗಳಿಗೆ ವಿಭಕ್ತಿ ಪ್ರತ್ಯಯಗಳು ಸೇರಿದರೆ ಆ ಪದಗಳು ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲ.

लडका + से = लड़के से     कमरा + में = कमरे में
कपड़ा + पर = कपड़े पर     कुत्ता + को = कुत्ते को

ಈ ಮೇಲಿನ ಪಟ್ಟಿಯಂತೆ आ ಕಾರಾಂತ ಪುಲ್ಲಿಂಗ ನಾಮಪದಗಳ ಏಕವಚನ ಪದಗಳ ಅಂತ್ಯವು ಬಹುವಚನದಲ್ಲಿ ए ಕಾರಾಂತವನ್ನು ಪಡೆಯುತ್ತವೆ.

| ಏಕ | ಬಹು |
|---|---|
| बैल ने | बैलों ने |
| लड़के को | लड़कों को |
| घर में | धरों में |
| टोपी से | टोपियों से |

ಸಾಮಾನ್ಯವಾಗಿ ಎಲ್ಲಾ ನಾಮಪದಗಳ ಬಹುವಚನ ರೂಪಗಳಿಗೆ ವಿಭಕ್ತಿ ಪ್ರತ್ಯಯಗಳು ಸೇರುವಾಗ ओं ಸೇರಿಕೊಂಡು ಬರುವುವು.

## का, के, की ನಿಯಮ

मोहन का घोडा     विमला का घर
ललिता का कपडा     सीता का गिलास
राम का कमरा     नारियल का पेड

का ಎಂಬ ಷಷ್ಠೀವಿಭಕ್ತಿ ಪ್ರತ್ಯಯವು ಅದರ ಮುಂದಿರುವ ನಾಮ ಪದದ ಲಿಂಗ, ವಚನಗಳ ಅನುಸಾರವಾಗಿ ಮಾರ್ಪಡುತ್ತದೆ.

का ಪ್ರತ್ಯಯವನ್ನು ಮುಂದಿರುವ ನಾಮಪದವು ಪುಲ್ಲಿಂಗ ಏಕವಚನ ದಲ್ಲಿರುವಾಗ ಉಪಯೋಗಿಸಲಾಗುವುದು.

नारायण के कपडे     मोहन के कमरे में
सीता के कमरे     गोविंद के घोडों को

के ಪ್ರತ್ಯಯವನ್ನು ಮುಂದಿರುವ ನಾಮಪದವು ಪುಲ್ಲಿಂಗ ಬಹುವಚನದಲ್ಲಿರುವಾಗಲೂ ಮತ್ತು ನಾಮಪದಕ್ಕೆ ವಿಭಕ್ತಿಪ್ರತ್ಯಯವು ಸೇರಿರುವಾಗಲೂ ಉಪಯೋಗಿಸಲಾಗುವುದು.

| | |
|---|---|
| स्कूल **की** लड़की | शंकर **की** दूकान में |
| राम **की** पुस्तकें | मोहन **की** टोपियों को |
| घर **की** खिड़कियाँ | विमला **की** बहन से |

की ಪ್ರತ್ಯಯವನ್ನು ಮುಂದಿರುವ ನಾಮಪದವು ಸ್ತ್ರೀಲಿಂಗದಲ್ಲಿದ್ದು ಅದು ಏಕವಚನದಲ್ಲಿರಲಿ, ಬಹುವಚನದಲ್ಲಿರಲಿ ಮತ್ತು ಅದಕ್ಕೆ ವಿಭಕ್ತಿಪ್ರತ್ಯಯವು ಸೇರಿರಲಿ, ಸೇರದಿರಲಿ ಉಪಯೋಗಿಸಲಾಗುವುದು.

# सर्वनाम ಸರ್ವನಾಮ *PRONOUN*

| | |
|---|---|
| **मोहन** सबेरे उठता है । | **मोहन** सबेरे उठता है । |
| ಮೋಹನನು ಬೆಳಿಗ್ಗೆ ಏಳುತ್ತಾನೆ. | ಮೋಹನನು ಬೆಳಿಗ್ಗೆ ಏಳುತ್ತಾನೆ. |
| **मोहन** हाथ-मुँह धोता है । | **वह** हाथ-मुँह धोता है । |
| ಮೋಹನ ಕೈಮುಖತೊಳೆಯುತ್ತಾನೆ. | ಅವನು ಕೈ ಮುಖತೊಳೆಯುತ್ತಾನೆ. |
| **मोहन** पाठ पढता है । | **वह** पाठ पढता है । |
| ಮೋಹನನು ಪಾಠವನ್ನು ಓದುತ್ತಾನೆ. | ಅವನು ಪಾಠವನ್ನು ಓದುತ್ತಾನೆ. |
| **राम** यहाँ आओ । | **राम**, यहाँ आओ । |
| ರಾಮು, ಇಲ್ಲಿ ಬಾ. | ರಾಮು, ಇಲ್ಲಿ ಬಾ. |
| **राम** यहाँ बैठो । | **तुम** यहाँ बैठो । |
| ರಾಮು, ಇಲ್ಲಿ ಕುಳಿತುಕೋ. | ನೀನು ಇಲ್ಲಿ ಕುಳಿತುಕೋ. |
| **राम** पाठ पढो । | **तुम** पाठ पढो । |
| ರಾಮು, ಪಾಠ ಓದು. | ನೀನು ಪಾಠ ಓದು. |

ಮೇಲಿನ 1ನೇ ಸಾಲಿನ ವಾಕ್ಯಗಳಲ್ಲಿ ಮೋಹನ, ರಾಮು ಎಂಬ ನಾಮಪದಗಳು ವಾಕ್ಯಗಳಲ್ಲಿ ಪದೇ ಪದೇ ಬಂದಿವೆ. ಆದ ಕಾರಣ ವಾಕ್ಯಗಳಲ್ಲಿ ಪುನರುಕ್ತಿ ಉಂಟಾಗಿ ವಾಕ್ಯಗಳಲ್ಲಿನ ನಿಜವಾದ ಸೌಂದರ್ಯವು ಕೆಟ್ಟುಹೋಗಿದೆ. 2ನೇ ಗುಂಪಿನಲ್ಲಿ ಮೋಹನ, ರಾಮು ಎಂಬ ಪದಗಳು ಒಂದು ಸಾರಿ ಉಪಯೋಗಿಸಿದ ಮೇಲೆ ಪುನಃ ಅವುಗಳೇ ಬಾರದೆ ಅವುಗಳಿಗೆ ಬದಲಾಗಿ वह, तुम ಎಂಬ ಪದಗಳು ಬಂದಿವೆ. ಆ ಮೂಲಕ ವಾಕ್ಯಗಳು ನಿಜವಾದ ಸೌಂದರ್ಯದಿಂದ ಕೂಡಿವೆ.

ಈ ರೀತಿ ನಾಮಪದಗಳಿಗೆ ಬದಲಾಗಿ ಬಂದು ಅದೇ ಅರ್ಥವನ್ನು ಕೊಡುವಂತಹ ಬೇರೆ ಶಬ್ದಗಳಿಗೆ ಸರ್ವನಾಮಗಳೆಂದು ಹೆಸರು.

Funding: Tattva Heritage Foundation,Kolkata. Digitization: eGangotri.

## ಸರ್ವನಾಮಗಳು 6 ವಿಧ

1. **पुरुषवाचक सर्वनाम ಪುರುಷವಾಚಕ ಸರ್ವನಾಮ.**
   ಪುರುಷವಾಚಕ ಸರ್ವನಾಮಗಳಲ್ಲಿ 3 ಒಳ ಭೇದಗಳಿವೆ:
   *a*) उत्तम पुरुष ಉತ್ತಮ ಪುರುಷ मैं ನಾನು
   *b*) मध्यम पुरुष ಮಧ್ಯಮ ಪುರುಷ तू ನೀನು
   *c*) अन्य पुरुष ಪ್ರಥಮ ಪುರುಷ वह ಅವನು, ಅವಳು, ಅದು
   यह ಇವನು, ಇವಳು, ಇದು
2. प्रश्नवाचक सर्वनाम कौन ಯಾರು (ಸಜೀವ) क्या ಏನು (ನಿರ್ಜೀವ)
   ಪ್ರಶ್ನವಾಚಕ ಸರ್ವನಾಮ
3. संबंधवाचक सर्वनाम जो ಯಾರು (ಸಂಬಂಧ)
   ಸಂಬಂಧ ವಾಚಕ ಸರ್ವನಾಮ
4. अनिश्चयवाचक सर्वनाम कोई ಯಾರೋ कुछ ಸ್ವಲ್ಪ
   ಅನಿಶ್ಚಯವಾಚಕ ಸರ್ವನಾಮ
5. निश्चयवाचक सर्वनाम वह ಅವನು, ಅವಳು, ಅದು (ಆ)
   ನಿಶ್ಚಯವಾಚಕ ಸರ್ವನಾಮ यह ಇವನು, ಇವಳು, ಇದು (ಈ)
6. निजवाचक सर्वनाम आप ತಾವು
   ನಿಜವಾಚಕ ಸರ್ವನಾಮ खुद ತಾನೇ
   स्वयं ತಾನು

ನಾಮಪದಗಳಂತೆಯೇ ಅವುಗಳಿಗೆ ಬದಲಾಗಿ ಬರುವ ಸರ್ವನಾಮಗಳಿಗೂ ಲಿಂಗ, ವಚನ ಮತ್ತು ವಿಭಕ್ತಿ ಎಂಬ 3 ಲಕ್ಷಣಗಳುಂಟು.

## लिंग ಸರ್ವನಾಮಗಳ ಲಿಂಗ

| ಪುಲ್ಲಿಂಗ | ಸ್ತ್ರೀಲಿಂಗ |
|---|---|
| मैं ನಾನು | मैं ನಾನು |
| तू ನೀನು | तू ನೀನು |

Funding: Tattva Heritage Foundation,Kolkata. Digitization: eGangotri.

| ಪುಲ್ಲಿಂಗ | ಸ್ತ್ರೀಲಿಂಗ |
|---|---|
| वह ಅವನು, ಅದು | वह ಅವಳು |
| कौन ? ಯಾರು ? | कौन ? ಯಾರು ? |
| जो ಯಾರು (ಸಂಬಂಧ) | जो ಯಾರು (ಸಂಬಂಧ) |
| कोई ಯಾರೋ | कोई ಯಾರೋ |
| मैं आया। ನಾನು ಬಂದೆನು | मैं आयी। ನಾನು ಬಂದೆನು |
| तू गया। ನೀನು ಹೋದೆ | तू गयी। ನೀನು ಹೋದೆ |
| वह उठा। ಅವನು ಎದ್ದನು | वह उठी, ಅವಳು ಎದ್ದಳು |

ಲಿಂಗ ಭೇದದಿಂದ ಸರ್ವನಾಮಗಳ ರೂಪಗಳಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಆದರೆ ಅವುಗಳ ಕ್ರಿಯಾರೂಪಗಳಲ್ಲಿ ಮಾತ್ರ ಅವುಗಳ ಲಿಂಗಗಳನ್ನು ಗೊತ್ತು ಮಾಡಬಹುದು.

## वचन ಸರ್ವನಾಮಗಳ ವಚನ

| ಏಕ | ಬಹು |
|---|---|
| मैं ನಾನು | हम ನಾವು |
| तू ನೀನು | तुम ನೀವು |
| | आप ತಾವು |
| वह ಅವನು, ಅವಳು, ಅದು | वे ಅವರು, ಅವು |
| यह ಇವನು, ಇವಳು, ಇದು | ये ಇವರು, ಇವು |
| कौन आया ? ಯಾರು ಬಂದರು ? | कौन आये ? ಯಾರು ಬಂದರು ? |
| क्या है ? ಏನಿದೆ ? | क्या हैं ? ಏನಿವೆ ? |
| कोई आया। ಯಾರೋ ಬಂದರು | कोई आये। ಯಾರೋ ಬಂದರು ? |
| वह उठा। ಅವನು ಎದ್ದನು | वे उठे। ಅವರು ಎದ್ದರು |
| जो गया। ಯಾರು ಹೋದರು | जो गये, ಯಾರು ಹೋದರು |

ನಾಮಪದಗಳಂತೆಯೇ ಸರ್ವನಾಮಗಳಿಗೂ ಏಕವಚನ, ಬಹುವಚನಗಳುಂಟು. ಆದರೆ कौन, जो, कोई ಈ ಸರ್ವನಾಮಗಳು ಎರಡೂ ವಚನಗಳಲ್ಲಿ ಏಕರೂಪಗಳಾಗಿದ್ದರೂ, ಕ್ರಿಯಾ ರೂಪಗಳ ಸಹಾಯದಿಂದ ಅವುಗಳ ವಚನಗಳನ್ನು ತಿಳಿದುಕೊಳ್ಳಬಹುದು.

## कारक चिह्न ಸರ್ವನಾಮಗಳ ವಿಭಕ್ತಿ

ನಾಮಪದಗಳಂತೆಯೇ ಸರ್ವನಾಮಗಳಿಗೂ 8 ವಿಭಕ್ತಿ ಪ್ರತ್ಯಯಗಳು ಸೇರುತ್ತವೆ. ಹೀಗೆ ಸೇರುವಾಗ ಅವು ವಿವಿಧ ರೂಪಾಂತರವನ್ನು ಹೊಂದುತ್ತವೆ. ಆ ಕಾರಣ ಅವುಗಳ ವಿವಿಧ ರೂಪಾಂತರ ಕ್ರಮವನ್ನು ಸ್ಥೂಲವಾಗಿ ಈ ಕೆಳಗೆ ಬರೆಯಲಾಗಿದೆ. ಈ ರೂಪಾಂತರಗಳು ಏಕವಚನ, ಬಹುವಚನಗಳೆರಡಕ್ಕೂ ಅನ್ವಯಿಸುತ್ತವೆ.

### मैं ನಾನು हम ನಾವು ಇವುಗಳ ರೂಪಗಳು

| | |
|---|---|
| मैं+को=मुझको, मुझे<br>ನನ್ನನ್ನು, ನನಗೆ | हम+को=हमको, हमें<br>ನಮ್ಮನ್ನು, ನಮಗೆ |
| मैं+से=मुझसे<br>ನನ್ನಿಂದ | हम+से=हमसे<br>ನಮ್ಮಿಂದ |
| मैं+के लिये=मेरे लिये<br>ನನಗಾಗಿ, ನನಗೋಸ್ಕರ | हम+के लिये=हमारे लिये<br>ನಮಗಾಗಿ, ನಮಗೋಸ್ಕರ |
| मैं+का, के, की=मेरा, मेरे, मेरी<br>ನನ್ನ | हम+का, के, की=हमारा, हमारे, हमारी ನಮ್ಮ |
| मैं+में, पर=मुझमें, मुझपर<br>ನನ್ನಲ್ಲಿ, ನನ್ನ ಮೇಲೆ | हम+में, पर=हम में, हम पर<br>ನಮ್ಮಲ್ಲಿ, ನಮ್ಮ ಮೇಲೆ |

### तू ನೀನು, तुम ನೀವು ಇವುಗಳ ರೂಪಗಳು

| | |
|---|---|
| तू+को=तुझको, तुझे<br>ನಿನ್ನನ್ನು, ನಿನಗೆ | तुम+को=तुमको, तुम्हें<br>ನಿಮ್ಮನ್ನು, ನಿಮಗೆ |
| तू+से=तुझसे<br>ನಿನ್ನಿಂದ | तुम+से=तुम से<br>ನಿಮ್ಮಿಂದ |

तू+का, के, की=तेरा, तेरे, तेरी ನಿನ್ನ
तुम+का, के, की=तुम्हारा, तुम्हारे, तुम्हारी ನಿಮ್ಮ

ಇದೇ ರೀತಿ वह, यह ಎಂಬುವು उस, इस ರೂಪಗಳನ್ನೂ, वे, ये ಎಂಬುವು उन, इन ರೂಪಗಳನ್ನೂ ಮತ್ತು कौन ಎಂಬುದು किस, किन ರೂಪಗಳನ್ನೂ, कोई ಎಂಬುದು किसी, किन्हीं ರೂಪಗಳನ್ನೂ जो ಎಂಬುದು जिस, जिन ರೂಪಗಳನ್ನೂ ಹೊಂದಿ ವಿಭಕ್ತಿ ಪ್ರತ್ಯಯಗಳನ್ನು ಹೊಂದುತ್ತವೆ.

# विशेषण ನಾಮವಿಶೇಷಣ
## (*ADJECTIVE*)

राम अच्छा लडका है ।
ರಾಮನು ಒಳ್ಳೆಯ ಹುಡುಗ.

छोटी लडकी रोज यहाँ आती है।
ಚಿಕ್ಕ ಹುಡುಗಿಯು ನಿತ್ಯವೂ ಇಲ್ಲಿ ಬರುತ್ತಾಳೆ.

ललिता के पास चार रुपये हैं।
ಲಲಿತಳ ಹತ್ತಿರ ನಾಲ್ಕು ರೂಪಾಯಿ ಇವೆ.

दो लडके स्कूल जाते हैं ।
ಇಬ್ಬರು ಹುಡುಗರು ಸ್ಕೂಲಿಗೆ ಹೋಗುತ್ತಾರೆ.

तुम ज्यादह बातें नहीं करो ।
ನೀನು ಹೆಚ್ಚು ಮಾತನಾಡಬೇಡ.

हमेशा कम खर्च करो ।
ಯಾವಾಗಲೂ ಕಡಿಮೆ ಖರ್ಚು ಮಾಡು.

यह गाय सुंदर है ।
ಈ ಹಸು ಸುಂದರವಾಗಿದೆ.

वह बूढा गिर पडा ।
ಆ ಮುದುಕನು ಬಿದ್ದುಬಿಟ್ಟನು.

| | | |
|---|---|---|
| ಎಂತಹ ಹುಡುಗ ? | ಒಳ್ಳೆಯ ಹುಡುಗ | अच्छा लडका |
| ಯಾವ ಹುಡುಗಿ ? | ಚಿಕ್ಕ ಹುಡುಗಿ | छोटी लडकी |
| ಎಷ್ಟು ರೂಪಾಯಿಗಳು ? | ನಾಲ್ಕು ರೂಪಾಯಿಗಳು | चार रुपये |
| ಎಷ್ಟು ಹುಡುಗರು ? | ಇಬ್ಬರು ಹುಡುಗರು | दो लडके |
| ಹೇಗೆ ಮಾತನಾಡಬೇಡ ? | ಹೆಚ್ಚಾಗಿ ಮಾತನಾಡಬೇಡ | ज्यादह बातें |
| ಯಾವ ಪ್ರಮಾಣ ಖರ್ಚು ಮಾಡು ? | ಕಡಿಮೆ ಖರ್ಚು | कम खर्च |
| ಯಾವ ಹಸು ? | ಈ ಹಸು | यह गाय |
| ಯಾವ ಮುದುಕ ? | ಆ ಮುದುಕ | वह बूढा |

ಮೇಲಿನ ವಾಕ್ಯಗಳಲ್ಲಿರುವ अच्छा, छोटी, चार, दो, ज्यादह, कम, यह और वह ಎಂಬ ಪದಗಳು ತಮ್ಮ ಮುಂದಿರುವ ನಾಮಪದಗಳ ಗುಣ, ಎಣಿಕೆ, ಪರಿಮಾಣ ಮತ್ತು ನಿರ್ದಿಷ್ಟತೆಯನ್ನು ತಿಳಿಸುತ್ತವೆ. ಇಂತಹ ಪದಗಳನ್ನು ವ್ಯಾಕರಣದಲ್ಲಿ ನಾಮ ವಿಶೇಷಣ ಎಂದು ಕರೆಯುತ್ತಾರೆ.

ನಾಮ ವಿಶೇಷಣಗಳು 4 ವಿಧ

(a) गुणवाचक विशेषण ಗುಣವಾಚಕ ವಿಶೇಷಣ
(b) संख्यावाचक विशेषण ಸಂಖ್ಯಾವಾಚಕ ವಿಶೇಷಣ
(c) परिमाणवाचक विशेषण ಪರಿಮಾಣವಾಚಕ ವಿಶೇಷಣ
(d) सार्वनामिक विशेषण ಸರ್ವನಾಮ ವಿಶೇಷಣ

ನಾಮ ವಿಶೇಷಣವು ಯಾವ ನಾಮಪದದ ಗುಣ ಅಥವಾ ಸ್ವಭಾವವನ್ನು ತಿಳಿಸುತ್ತದೋ ಆ ನಾಮಪದಕ್ಕೆ ವಿಶೇಷ್ಯ ಎಂದು ಹೆಸರು.

## लिंग, वचन, विभक्ति

## ನಾಮ ವಿಶೇಷಣಗಳ ಲಿಂಗ, ವಚನ, ವಿಭಕ್ತಿ

ನಾಮಪದ, ಸರ್ವನಾಮಗಳಂತೆಯೇ ನಾಮ ವಿಶೇಷಣಗಳಿಗೂ ಲಿಂಗ, ವಚನ, ವಿಭಕ್ತಿಗಳೆಂಬ 3 ಲಕ್ಷಣಗಳುಂಟು.

ಹಿಂದೀ ಭಾಷೆಯ ಎಲ್ಲಾ ವಿಶೇಷಣಗಳ ಲಿಂಗ, ವಚನ, ವಿಭಕ್ತಿ ಪ್ರತ್ಯಯಗಳು ಮುಂದಿರುವ ನಾಮಪದದ ಅಂದರೆ ವಿಶೇಷ್ಯದ ಲಿಂಗ, ವಚನ, ವಿಭಕ್ತಿಗಳನ್ನು ಅನುಸರಿಸುತ್ತವೆ.

## आ ए ई ನಿಯಮ

ನಾಮಪದ

| लड़का | लड़के | लड़की |
|---|---|---|
| ಹುಡುಗ | ಹುಡುಗರು | ಹುಡುಗಿ |

## ನಾಮವಿಶೇಷಣ

| काला लडका | काले लडके | काली लडकी |
|---|---|---|
| ಕಪ್ಪು ಹುಡುಗ | ಕಪ್ಪು ಹುಡುಗರು | ಕಪ್ಪು ಹುಡುಗಿ |

## ಕ್ರಿಯಾಪದ

| लडका करता है। | लडके करते हैं। | लडकी करती है। |
|---|---|---|
| ಹುಡುಗನುಮಾಡುತ್ತಾನೆ | ಹುಡುಗರುಮಾಡುತ್ತಾರೆ | ಹುಡುಗಿಮಾಡುತ್ತಾಳೆ |

ಮೇಲಿನ ಉದಾಹರಣೆಗಳಂತೆ ಪುಲ್ಲಿಂಗ ಏಕವಚನದಲ್ಲಿರುವ आ ಕಾರಾಂತ ನಾಮಪದಗಳೂ, ನಾಮ ವಿಶೇಷಣಗಳೂ ಮತ್ತು ಕ್ರಿಯಾ ರೂಪಗಳೂ ಪುಲ್ಲಿಂಗ ಬಹುವಚನದಲ್ಲಿ ए ಕಾರಾಂತವಾಗಿಯೂ, ಸ್ತ್ರೀಲಿಂಗ ಏಕವಚನ, ಬಹುವಚನಗಳೆರಡರಲ್ಲಿಯೂ ई ಕಾರಾಂತವಾಗಿಯೂ ಮಾರ್ಪಡುವುವು.

सुस्त लडका
ಸೋಮಾರಿ ಹುಡುಗ

साफ कमरे
ಶುಚಿ ಕೊಠಡಿಗಳು

सफेद धोती
ಬಿಳಿ ಪಂಚೆ

नरम उँगलियाँ
ಮೃದು ಬೆರಳುಗಳು

तेज घोडे पर
ಚುರುಕಾದ ಕುದುರೆಯ ಮೇಲೆ

एक पुस्तक में
ಒಂದು ಪುಸ್ತಕದಲ್ಲಿ

अ ಕಾರಾಂತ ವಿಶೇಷಣಗಳು ಮುಂದಿರುವ ನಾಮಪದಗಳು ಯಾವ ಲಿಂಗ, ವಚನ, ವಿಭಕ್ತಿಯಲ್ಲಿರಲಿ, ಏನೂ ವ್ಯತ್ಯಾಸವನ್ನು ಹೊಂದದೆ ಇದ್ದ ರೂಪದಲ್ಲಿಯೇ ಇರುತ್ತವೆ.

बुरा कुत्ता
ಕೆಟ್ಟ ಗಂಡು ನಾಯಿ

बडा कमरा
ದೊಡ್ಡ ಕೊಠಡಿ

बुरे कुत्ते
ಕೆಟ್ಟ ಗಂಡು ನಾಯಿಗಳು

बडे कमरे
ದೊಡ್ಡ ಕೊಠಡಿಗಳು

| | |
|---|---|
| बुरे कुत्ते को | बड़े कमरे को |
| ಕೆಟ್ಟ ಗಂಡು ನಾಯಿಯನ್ನು | ದೊಡ್ಡ ಕೊಠಡಿಯನ್ನು |
| बुरे कुत्तों को | बड़े कमरों को |
| ಕೆಟ್ಟ ಗಂಡು ನಾಯಿಗಳನ್ನು | ದೊಡ್ಡ ಕೊಠಡಿಗಳನ್ನು |
| बुरी कुत्ती | मोटी किताब |
| ಕೆಟ್ಟ ಹೆಣ್ಣು ನಾಯಿ | ದಪ್ಪ ಪುಸ್ತಕ |
| बुरी कुत्तियाँ | मोटी किताबें |
| ಕೆಟ್ಟ ಹೆಣ್ಣು ನಾಯಿಗಳು | ದಪ್ಪ ಪುಸ್ತಕಗಳು |
| बुरी कुत्ती को | मोटी किताब को |
| ಕೆಟ್ಟ ಹೆಣ್ಣು ನಾಯಿಯನ್ನು | ದಪ್ಪ ಪುಸ್ತಕವನ್ನು |
| बुरी कुत्तियों को | मोटी किताबों को |
| ಕೆಟ್ಟ ಹೆಣ್ಣು ನಾಯಿಗಳನ್ನು | ದಪ್ಪ ಪುಸ್ತಕಗಳನ್ನು |

ಆ ಕಾರಾಂತದ ವಿಶೇಷಣಗಳು ಮುಂದಿರುವ ವಿಶೇಷ್ಯವು ಪುಲ್ಲಿಂಗ ಬಹುವಚನದಲ್ಲಿದ್ದರೂ ಅಥವಾ ಪುಲ್ಲಿಂಗ ಏಕವಚನದಲ್ಲಿದ್ದು ಅದಕ್ಕೆ ವಿಭಕ್ತಿ ಪ್ರತ್ಯಯವು ಸೇರಿದ್ದರೂ ಏ ಕಾರಾಂತಗಳಾಗಿಯೂ ಮತ್ತು ಸ್ತ್ರೀಲಿಂಗದಲ್ಲಿದ್ದು ಯಾವುದೇ ವಚನದಲ್ಲಿರಲಿ, ವಿಭಕ್ತಿ ಪ್ರತ್ಯಯಗಳನ್ನು ಹೊಂದಿರಲಿ, ಹೊಂದದಿರಲಿ, ಈ ಕಾರಾಂತ ವಿಶೇಷಣಗಳಾಗಿಯೂ ಬದಲಾಯಿಸುತ್ತವೆ.

## *IV.* क्रिया ಕ್ರಿಯಾಪದ (*VERB*)

(1) राम **पढता है।** ರಾಮನು ಓದುತ್ತಾನೆ.

(2) सीता **लिखती है।** ಸೀತೆಯು ಬರೆಯುತ್ತಾಳೆ.

(3) लडका **बैठा।** ಹುಡುಗನು ಕುಳಿತುಕೊಂಡನು.

(4) विमला **उठी।** ವಿಮಲೆಯು ಎದ್ದಳು.

(5) मोहन **पढेगा।** ಮೋಹನನು ಓದುವನು.

(6) बिल्ली **दौडेगी।** ಬೆಕ್ಕು ಓಡುವುದು.

ಮೇಲಿನ ವಾಕ್ಯಗಳಲ್ಲಿ ದಪ್ಪ ಅಕ್ಷರಗಳಲ್ಲಿ ಬರೆದಿರುವ ಶಬ್ದಗಳು ನಾಮಪದಗಳು (ಕರ್ತೃಪದ) ಮಾಡಿದ ಕೆಲಸವನ್ನು ತಿಳಿಸುತ್ತವೆ.

ಈ ರೀತಿ ನಾಮಪದವು ಮಾಡಿದ ಕೆಲಸವನ್ನು ತಿಳಿಸುವ ಶಬ್ದಗಳು ಕ್ರಿಯಾ ಪದಗಳು. ಕ್ರಿಯೆ ಎಂದರೆ ಕೆಲಸ ಎಂದರ್ಥ.

ಈಗ ಇವುಗಳನ್ನು ವಿಭಜಿಸಿ ನೋಡೋಣ:

पढता है = पढ + ता + है

लिखती है = लिख + ती + है

पढ ಮತ್ತು लिख ಎಂಬುವು ಮೂಲ ಧಾತುಗಳು (ಕ್ರಿಯಾಪದದ ಮೂಲ ರೂಪಗಳು)

ता ಮತ್ತು ती ಎಂಬುವು ಆಖ್ಯಾತ ಪ್ರತ್ಯಯಗಳು.

है ಎಂಬುವು ಸಹಾಯಕ ಕ್ರಿಯೆಗಳು.

बैठा = बैठ + आ

उठी = उठ + ई

ಬೈಠ ಮತ್ತು ಉಠ ಎಂಬುವು ಮೂಲ ಧಾತುಗಳು.

ಆ ಮತ್ತು ಈ ಎಂಬುವು ಆಖ್ಯಾತ ಪ್ರತ್ಯಯಗಳು.

पढेगा = पढ + एगा

दौड़ेगी = दौड + एगी

ಪಢ ಮತ್ತು ದೌಡ ಎಂಬುವು ಮೂಲ ಧಾತುಗಳು.

ಏಗಾ ಮತ್ತು ಏಗೀ ಎಂಬುವು ಆಖ್ಯಾತ ಪ್ರತ್ಯಯಗಳು.

ಮೇಲೆ ವಿಭಜಿಸಿರುವ ರೀತಿಯಲ್ಲಿ ಕ್ರಿಯಾಪದಗಳಾಗಲು ಅವುಗಳ ಮೂಲರೂಪಗಳಾದ ಧಾತುಗಳೂ, ಅವುಗಳಿಗೆ ಸೇರುವ ಆಖ್ಯಾತ ಪ್ರತ್ಯಯಗಳೂ ಮತ್ತು ಸಹಾಯಕ ಕ್ರಿಯೆಗಳೂ ಇರಬೇಕು.

ಧಾತುಗಳು—कर, खेल, पढ, बैठ, लिख, सुन, जा ಇತ್ಯಾದಿ.

ಪ್ರತ್ಯಯಗಳು—ता, ते, ती, आ, ई, एगा, एगी ಇತ್ಯಾದಿ.

ಸಹಾಯಕ ಕ್ರಿಯೆಗಳು—हूँ, है, हैं, हो ಇತ್ಯಾದಿ.

ಧಾತುಗಳು 2 ವಿಧ : (1) ಅಕರ್ಮಕ ಧಾತು, (2) ಸಕರ್ಮಕ ಧಾತು.

## 1. ಅಕರ್ಮಕ ಧಾತು

1) मोहन आता है।
ಮೋಹನನು ಬರುತ್ತಾನೆ.

5) मोहन आया।
ಮೋಹನನು ಬಂದನು.

2) लड़की जाती है।
ಹುಡುಗಿಯು ಹೋಗುತ್ತಾಳೆ

6) लड़की गयी।
ಹುಡುಗಿಯು ಹೋದಳು.

3) बच्चा उठ रहा है।
ಹುಡುಗನು ಏಳುತ್ತಿದ್ದಾನೆ.

7) बच्चा उठा।
ಹುಡುಗನು ಎದ್ದನು.

4) बिल्ली भाग रही है।
ಬೆಕ್ಕು ಓಡುತ್ತಿದೆ.

8) बिल्ली भागी।
ಬೆಕ್ಕು ಓಡಿತು.

ಮೇಲಿನ ವಾಕ್ಯಗಳಲ್ಲಿ ಬಂದಿರುವ ಜಾ, ಜಾ, ತಠ, ಭಾಗ ಮುಂತಾದ ಕೆಲವು ಧಾತುಗಳ ಕ್ರಿಯಾ ಪದಗಳು ವಾಕ್ಯಗಳಲ್ಲಿ ಬಂದಾಗ ಕರ್ಮಪದ ಗಳ ಅವಶ್ಯಕತೆಯಿಲ್ಲದೆ ವಾಕ್ಯಗಳು ಪೂರ್ಣ ಅರ್ಥವನ್ನು ಕೊಡುತ್ತವೆ. ಹೇಗೆಂದರೆ—ಕ್ರಿಯಾಪದದ ಮೇಲೆ ಏನನ್ನು ಬರುತ್ತಾನೆ? ಯಾರನ್ನು ಹೋಗುತ್ತಾಳೆ? ಎಂದು ಪ್ರಶ್ನೆ ಹಾಕಿದರೆ ಉತ್ತರವು ಬರುವುದಿಲ್ಲ. ಆದರೂ ಮೇಲಿನ ವಾಕ್ಯಗಳು ಪೂರ್ಣ ಅರ್ಥವನ್ನು ಕೊಡುತ್ತವೆ. ವ್ಯಾಕರಣದಲ್ಲಿ ಇಂತಹ ಕ್ರಿಯಾಪದಗಳ ಮೂಲರೂಪಗಳಾದ ಧಾತುಗಳು **ಅಕರ್ಮಕ ಧಾತುಗಳೆಂದು** ಕರೆಯಲ್ಪಡುತ್ತವೆ. **ಅಕರ್ಮಕ ಧಾತು ಗಳೆಂದರೆ ಕರ್ಮಪದಗಳ ಆವಶ್ಯಕತೆ ಇಲ್ಲದ ಧಾತುಗಳು.**

## 2. ಸಕರ್ಮಕ ಧಾತುಗಳು

1) शंकर पाठ लिखता है।
ಶಂಕರನು ಪಾಠವನ್ನು ಬರೆಯುತ್ತಾನೆ.

2) सीता पाठ पढ़ती है।
ಸೀತೆಯು ಪಾಠವನ್ನು ಓದುತ್ತಾಳೆ.

3) राम काफी पी रहा है।
ರಾಮನು ಕಾಫಿಯನ್ನು ಕುಡಿಯುತ್ತಿದ್ದಾನೆ.

4) वह गान गा रहा है।
ಅವನು ಗಾನವನ್ನು ಹಾಡುತ್ತಿದ್ದಾನೆ.

5) शंकर ने पाठ लिखा।
ಶಂಕರನು ಪಾಠವನ್ನು ಬರೆದನು.

6) सीता ने पाठ पढ़ा।
ಸೀತೆಯು ಪಾಠನ್ನು ಓದಿದಳು.

7) राम काफी पियेगा।
ರಾಮನು ಕಾಫಿಯನ್ನು ಕುಡಿಯುವನು.

8) वह गान गायेगी।
ಅವಳು ಗಾನವನ್ನು ಹಾಡುವಳು.

ಈ ಮೇಲಿನ ವಾಕ್ಯಗಳಲ್ಲಿ ಲಿಖ, ಪಢ, ಪೀ ಮತ್ತು ಶ್ರುನ ಧಾತುಗಳ ಕ್ರಿಯಾಪದಗಳು ವಾಕ್ಯಗಳಲ್ಲಿ ಬಂದಾಗ ಅವುಗಳಿಗೆ ಕರ್ಮಪದಗಳ ಅವಶ್ಯಕತೆ ಇರುತ್ತದೆ. ಹೇಗೆಂದರೆ—ಶಂಕರನು ಏನನ್ನು ಬರೆಯುತ್ತಾನೆ? ಸೀತೆಯು ಏನನ್ನು ಓದಿದಳು. ಇತ್ಯಾದಿ ಪ್ರಶ್ನೆಗಳನ್ನು ಪ್ರಶ್ನಿಸಿದರೆ ಆ ವಾಕ್ಯಗಳಲ್ಲಿ ಕರ್ಮಪದಗಳು ಇರುವ ಕಾರಣ ಉತ್ತರ ದೊರಕುತ್ತದೆ. ಮತ್ತು ವಾಕ್ಯಗಳೂ ಸಹ ಸಂಪೂರ್ಣ ಅರ್ಥವನ್ನು ಕೊಡುತ್ತವೆ. ಇಂತಹ ಧಾತುಗಳಿಗೆ **ಸಕರ್ಮಕ ಧಾತುಗಳೆಂದು** ಹೆಸರು.

**ಸಕರ್ಮಕ ಧಾತುಗಳೆಂದರೆ ಕರ್ಮಪದದ ಅವಶ್ಯಕತೆ ಇರುವ ಧಾತುಗಳು**

ಧಾತುಗಳು 2 ವಿಧ




ಕ್ರಿಯಾಪದಗಳಿಗೆ ಪುರುಷ, ಲಿಂಗ, ವಚನ ಕಾಲ ಮತ್ತು ಪ್ರಯೋಗ (ವಾಚ್ಯ)ಗಳೆಂಬ ಲಕ್ಷಣಗಳುಂಟು.

ಈಗ ಪುರುಷ, ಲಿಂಗ, ವಚನಗಳ ಆಧಾರದ ಮೇಲೆ ಕ್ರಿಯಾಪದಗಳ ಕಾಲಗಳನ್ನು ಅವಲೋಕಿಸೋಣ :

# काल ಕ್ರಿಯಾಪದಗಳ ಕಾಲಗಳು (*TENSE*)

ಕ್ರಿಯಾಪದಗಳು 3 ಕಾಲಗಳಾಗಿ ವಿಭಾಜಿತವಾಗಿವೆ:

(*a*) ವರ್ತಮಾನಕಾಲ, (*b*) ಭೂತಕಾಲ, (*c*) ಭವಿಷ್ಯತ್ಕಾಲ.

## *A.* वर्तमानकाल ವರ್ತಮಾನಕಾಲ (*PRESENT TENSE*)

ವರ್ತಮಾನಗಳು 3 ವಿಧ: 1) ಸಾಮಾನ್ಯ ವರ್ತಮಾನಕಾಲ 2) ಸಂದಿಗ್ಧ ವರ್ತಮಾನಕಾಲ, 3) ತಾತ್ಕಾಲಿಕ ವರ್ತಮಾನಕಾಲ.

### 1. सामान्य वर्तमानकाल ಸಾಮಾನ್ಯ ವರ್ತಮಾನಕಾಲ

कर ಧಾತು

ಉತ್ತಮ ಪುರುಷ

| | ಏಕ | ಬಹು |
|---|---|---|
| ಪು. | मैं करता हूँ। ನಾನು ಮಾಡುತ್ತೇನೆ. | हम करते हैं। ನಾವು ಮಾಡುತ್ತೇವೆ |
| ಸ್ತ್ರೀ. | मैं करती हूँ। ನಾನು ಮಾಡುತ್ತೇನೆ. | हम करती हैं। ನಾವು ಮಾಡುತ್ತೇವೆ. |

ಮಧ್ಯಮ ಪುರುಷ

| | | |
|---|---|---|
| ಪು. | तू करता है। ನೀನು ಮಾಡುತ್ತೀಯೆ. | तुम करते हो। ನೀವು ಮಾಡುತ್ತೀರಿ. |
| | | आप करते हैं। ತಾವು ಮಾಡುತ್ತೀರಿ. |

